ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೫೧ ಆಕ್ಟೋಬರ್ ೨೦೧೫ ಸಂಚಿಕೆ : ೧೦



ತುಮಕೂರಿನ ಟೌನ್‌ಹಾಲ್ ವೃತ್ತದಲ್ಲಿ ಮಹಾನಗರ ಪಾಲಿಕೆ ವತಿಯಿಂದ ಹಮ್ಮಿಕೊಂಡಿದ್ದ ಸ್ವಚ್ಛಭಾರತ್ ಮಿಷನ್ ಜಾಥಾಕ್ಕೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಚಾಲನೆ ನೀಡಿದರು. ಮೇಯರ್ ಶ್ರೀಮತಿ ಲಲಿತಾರವೀಶ್, ಶಾಸಕ ಡಾ. ರಫೀಕ್ ಅಹಮದ್, ಶ್ರೀಮತಿ ಮಮತಾ ಮುಂತಾದವರು ಪಾಲ್ಗೊಂಡಿದ್ದರು.




ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ನಡೆದ ಶಿಕ್ಷಕರ ದಿನಾಚರಣೆ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಗಳೀರ್ವರು ಹಾಗೂ ತುಮಕೂರು ಜಿಲ್ಲೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಈಶ್ವರಯ್ಯ ನವರು ಹಾಗೂ ತುಮಕೂರು ತಾಲ್ಲೂಕು ದಂಡಾಧಿಕಾರಿಗಳಾದ ಶ್ರೀ ಟಿ.ಸಿ. ಕಾಂತರಾಜುರವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ನಡೆದ ಶ್ರೀ ವಿದ್ಯಾಗಣಪತಿಯ ವಿಸರ್ಜನಾ ಮಹೋತ್ಸವದಲ್ಲಿ ಪರಮಪೂಜ್ಯ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರೊಂದಿಗೆ ದೆಹಲಿಯ ಅಕ್ಷರಧಾಮದ ಪೂಜ್ಯ ಶ್ರೀಗಳವರುಗಳು ಹಾಗೂ ಜನಪದ ಸಾಹಿತಿಗಳಾದ ಶ್ರೀ ಹೆಚ್.ವಿ. ವೀರಭದ್ರಯ್ಯನವರು ಉಪಸ್ಥಿತರಿದ್ದರು.




ಸಂಪಾದಕರು :
**ಹೇಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕರು :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೇಚ್.ಬಿ. ಗಂಗಾಧರಯ್ಯ**

ವಿತರಕರು :
**ಆರ್.ಎಸ್. ಮಲ್ಲೇಶಪ್ಪ**

ಛಾಯಾ ಚಿತ್ರಗಳು :
**ಬಿ.ಸಿ. ಸುರೇಶ್**

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ವಿಳಾಸ :
**'ಸಂಪಾದಕರು'**
**'ಸಿದ್ಧಗಂಗಾ'** ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು - ೫೭೨ ೧೦೪.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೫೧ ಅಕ್ಟೋಬರ್ ೨೦೧೫ ಸಂಚಿಕೆ : ೧೦**

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-
ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦

# ಗಾಂಧಿ ಜಯಂತಿ

ಮಹಾತ್ಮಾ ಗಾಂಧೀಜಿಯವರು ಜನಿಸಿದ್ದು ೧೮೬೯ನೇ ಅಕ್ಟೋಬರ್ ೨ನೇ ತಾರೀಖು. ಹುಟ್ಟಿದ ಊರು ಪೋರ್‌ಬಂದರ್ ಅಥವಾ ಸುಧಾಮಪುರಿ. ತಂದೆ ಕರಮ್‌ಚಂದ್‌ಗಾಂಧಿ ಅಥವಾ ಕಬಾ ಗಾಂಧೀ. ತಾಯಿ ಪುತಲೀಬಾಯಿ. ಗಾಂಧೀಜಿಯವರ ಪೂರ್ಣ ಹೆಸರು ಮೋಹನದಾಸ ಕರಮಚಂದಗಾಂಧಿ ಎಂದು. ಪತ್ನಿಯ ಹೆಸರು ಕಸ್ತೂರಿಬಾಯಿ.

ಗಾಂಧೀಯವರ ಆತ್ಮಕಥೆಯೊಂದು ಸತ್ಯಾನ್ವೇಷಣೆಯ ಕೃತಿ. ಅಲ್ಲಿನ ಕೆಲವು ಈ ಮಾತುಗಳತ್ತ ಗಮನ ಕೊಡೋಣ.

೧. ಹೆಂಡತಿ ಗಂಡನ ದಾಸಿಯಲ್ಲ. ಅವಳು ಸಹಚಾರಿಣಿ. ಇಬ್ಬರು ಪರಸ್ಪರ ಸುಖದುಃಖದಲ್ಲಿ ಸಮಾನವಾಗಿ ಭಾಗಿಗಳು.
೨. ಅಹಿಂಸೆ ವ್ಯಾಪಕವಾಗಿ ಹರಡಿದರೆ ಅದರ ಪ್ರಭಾವದಿಂದ ಯಾರೂ ಹೊರಗಾಗಲಾರದು. ಅದರ ಶಕ್ತಿಗೆ ಕೊನೆಯೇ ಇಲ್ಲ.
೩. ಕ್ಷಮಿಸುವ ಅಧಿಕಾರವುಳ್ಳವರ ಮುಂದೆ ನಮ್ಮ ತಪ್ಪನ್ನು ಒಪ್ಪಿಕೊಂಡು ಇನ್ನು ಮುಂದೆ ಹಾಗೆ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡುವುದು ಅತ್ಯಂತ ಪರಿಶುದ್ಧ ಪ್ರಾಯಶ್ಚಿತ್ತ.
೪. ಧರ್ಮ ಎಂದರೆ ಆತ್ಮ ಸಾಕ್ಷಾತ್ಕಾರ, ಆತ್ಮಜ್ಞಾನ.
೫. ಅಪಕಾರಕ್ಕೆ ಪ್ರತಿಯಾಗಿ ಮಾಡಬೇಕಾದುದು ಅಪಕಾರವನ್ನಲ್ಲ, ಉಪಕಾರವನ್ನು.
೬. ಒಂದು ಲೋಟ ನೀರು ಕೊಟ್ಟವರಿಗೆ ಊಟ ನೀಡು.
೭. ರುಚಿಯ ನಿಜವಾದ ಮೂಲ ನಾಲಗೆಯಲ್ಲ, ಮನಸ್ಸು.
೮. ಮಿತಭಾಷಿಯು ಯಾವಾಗಲೂ ತನ್ನ ಮಾತಿನಲ್ಲಿ ಎಚ್ಚರಿಕೆಯುಳ್ಳವನಾಗಿರುತ್ತಾನೆ.
೯. ಕೆಡುಕಿಗೆ ಪ್ರತಿಯಾಗಿ ಕೆಡುಕು ಮಾಡಬೇಡಿ.
೧೦. ತ್ಯಾಗವೇ ಅತ್ಯುತ್ತಮವಾದ ಧರ್ಮ.
೧೧. ಪರಮಾತ್ಮನ ಸ್ತುತಿ, ಪ್ರಾರ್ಥನೆ, ಉಪವಾಸ ಬರಿಯ ಅಂಧ ವಿಶ್ವಾಸವಲ್ಲ.
೧೨. ಪ್ರಾಜ್ಞರಾದವರು ಜನರ ಬಾಹ್ಯವೇಷವನ್ನು ನೋಡುವುದಿಲ್ಲ, ಅವರ ಹೃದಯವನ್ನು ಪರಿಶೀಲಿಸುತ್ತಾರೆ.
೧೩. ಪಠ್ಯಪುಸ್ತಕಗಳನ್ನು ಓದದಿರುವುದು ಒಂದು ದೊಡ್ಡ ಮೋಸ.
೧೪. ಪ್ರತಿಯೊಬ್ಬ ಭಾರತೀಯನೂ ಭಾರತದ ಇತಿಹಾಸವನ್ನು ತಿಳಿಯುವುದು ಅವನ ಕರ್ತವ್ಯ.

**ನವರಾತ್ರಿ ಹಬ್ಬದ ಶುಭಾಶಯಗಳು ಎಲ್ಲರಿಗೂ**

– ಸಂಪಾದಕ





# ‘ಮಠಕ್ಕೆ ಭಕ್ತರೇ ಆಸ್ತಿ’



**ಈ** ಮಠಕ್ಕೆ ಭಕ್ತರೇ ಆಸ್ತಿ; ಈಶ್ವರ ಕೃಪೆಯೇ ಅಕ್ಷಯ ಪಾತ್ರೆ. ನಾನು ನಿಮಿತ್ತ ಮಾತ್ರ. ಅವನೊಲಿದರೆ ಕೊರಡೂ ಕೊನರುತ್ತದೆ; ಬಂಜರು ನೆಲ ಫಲವತ್ತಾಗುತ್ತದೆ. ತಪೋನಿಷ್ಠೆಯಿಂದ ಕಾಯಕ ಮಾರ್ಗದಿಂದ ದುಡಿದರೆ ಈಶ್ವರ ತಾನಾಗಿಯೇ ಒಲಿಯುತ್ತಾನೆ. ‘ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ, ಸದ್‌ಭಕ್ತರಿಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು’ ಎಂಬ ಆಯ್ದಕ್ಕಿ ಮಾರಯ್ಯನ ಹೆಂಡತಿ ಲಕ್ಕಮ್ಮನ ಮಾತು ನೀವು ಕೇಳಿಲ್ಲವೆ?

‘.... ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು, ಎಂಬುವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ ಕೂಡಲಸಂಗಮಗೇಕೆ?’ ‘ಒಡೆಯರಿಗೊಡೆಯನೊಪ್ಪಿಸುವುದೇ ನೇಮ’. ‘ಒಡೆಯರು ಯಾರು? ಶರಣರು, ದೀನ ದರಿದ್ರರು



*‘ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ*
*ಏಡಿಸಿ ಕಾಡಿತ್ತು ಶಿವನ ಡಂಗುರ*
*ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ*
*ಮಾಡಿದೆನೆಂಬುದು ಮನದಲ್ಲಿಲ್ಲದಿದ್ದಡೆ*
*ಬೇಡಿತ್ತನೀವ ಕೂಡಲಸಂಗಮದೇವಾ*

ಯುಗಪುರುಷ ಬಸವೇಶ್ವರರೇ ಹೀಗೆ ಹೇಳಿಕೊಳ್ಳುವಾಗ ನನ್ನ ಅಗ್ಗಳಿಕೆ ಏನಿದೆ? ಇಷ್ಟೆಲ್ಲ ಅಭಿವೃದ್ಧಿ ಹೇಗೆ ಆಯಿತೆಂಬುದೇ ನನಗೆ ಗೊತ್ತಿಲ್ಲ.

*(ಕೃಪೆ: ಸಿದ್ಧಗಂಗೆಯ ಶಿವನಿಧಿ – ಡಾ. ದೇ.ಜ.ಗೌ. ಪ್ರಕಾಶಕರು – ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು (ರಿ.) ೧೫೨೮, ಅನಿಕೇತನ ರಸ್ತೆ, ಕುವೆಂಪು ನಗರ, ಮೈಸೂರು-೫೭೦ ೦೨೩)*

## ಶ್ರೀ ಸಿದ್ಧಲಿಂಗೇಶ್ವರ ವಚನ



***ಊರ ಮಧ್ಯದಿ ಹುಟ್ಟಿದ ಕಿಚ್ಚು ಮೇರುವೆಯ ಸುಟ್ಟಿತ್ತೂ ನೋಡಾ,***
***ಕೇರಿಕೇರಿಯಲ್ಲಿ ಬೀದಿವರಿದು ಅರಣ್ಯವನಾವರಿಸಿತ್ತು ನೋಡಾ***
***ಅರಣ್ಯದೊಳಗಿರುವ ಅಂಗನೆಯ ಮುಡಿ ಬೆಂದು***
***ಊರ ಹತ್ತಿದ ಕಿಚ್ಚು ಉಮಾಪತಿಯ ನಪ್ಪಲು***
***ನಾರೀ ಪುರುಷರಳಿದು ಮಾರಾರಿಯೊಬ್ಬನೇ ಆದನು ನೋಡಿರೇ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.***

ದೇಹವೆಂಬ ಗ್ರಾಮದ ಮಧ್ಯದಲ್ಲಿ ಉತ್ಪತ್ಯವಾದ ಚಿದಾಗ್ನಿ ಜ್ಞಾನವು ಮೂಲಹಂಕಾರವೆಂಬದ್ರಿಯನು ದಹಿಸಿತ್ತು ಕಂಡಾ ಇಂದ್ರಿಯಗಳೆಂಬ ಶ್ರೇಣಿ ಶ್ರೇಣಿಯಲ್ಲಿ ಚಲ್ಲವರಿದು ಭವಾರಣ್ಯ ವನು ಅವಗ್ರಹಿಸಿತ್ತು ಕಂಡಾ ಅರಣ್ಯದೊಳಗಿರ್ದ ಭವಾರಣ್ಯದಲ್ಲಿ ಇರುತ್ತಿರ್ದ ಮಾಯಾಶಕ್ತಿಯ ದುರಿತವೆಂಬ ಮಸ್ತಕವು ದಹನವಾಗಿ ದೇಹವೆಂಬ ಗ್ರಾಮವನು ಏರಿದ ಚಿದಾಗ್ನಿ ಜ್ಞಾನವು ಪಾರ್ವತೀ ವಲ್ಲಭನಾದಂಥ ಪರಶಿವ ಲಿಂಗವನು ತಕ್ಕೈಸಲು ದೇಹಾತ್ಮರುಗಳ ವರ್ಣನೆ ನಷ್ಟವಾಗಿ ಮನ್ಮಥ ಧ್ವಂಸಿಯಾದ ಪರಶಿವಲಿಂಗದಲ್ಲಿ ಕೂಡಿ ಪರಶಿವಲಿಂಗ ವಾದಂಥಾದನು ಕಂಡಿರೆ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

**(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು - ಡಾ॥ ಸಾ.ಶಿ. ಮರುಳಯ್ಯ ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)**

### ಶ್ರೀವಾಣಿ

ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನು ಗಳಿಸಬೇಕು. ಧರ್ಮಕ್ಕೆ ವಿರುದವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಭಕ್ತಿಯಲಿ ಬಸವಣ್ಣ ಶಕ್ತಿಯಲಿ ಬಸವಣ್ಣ
ಯೋಗದಲಿ ಬಸವಣ್ಣನಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುಖದ ಸುಳಿವೆಂಬುದ ನಿಮ್ಮಿಂದ ತಿಳಿದೆನು
ಇನ್ನು ಬಿಡೆನು ನಿಮ್ಮ ಶಿವಚರಣವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎನ್ನಿಚ್ಛೆ ಎನ್ನರಿವು ಎನ್ನ ಕ್ರಿಯಾಶಕ್ತಿ
ನಿನ್ನಾಧೀನವೆಂದು ನಂಬಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಮಾತಿನ ಬೂತುಗಳಿಗೆ ಭ್ರಾಂತುಳ್ಳ ಚಿತ್ತಂಗೆ'
ಎಂತೊಲಿವೆ ಎಂತೊಲಿವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನಿರಿಸಿದಂತಿರುವೆ ನೀಮಾಡಿದಂತಾದೆ
ನೀನು ನುಡಿಸಿದಂತೆ ನುಡಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯವು ಸತ್ತಿತೆ? ಸಾತ್ವಿಕರಳಿವರೆ ?
ತಕ್ಕು ತವಲುಗರಿಗೆ ಕೊನೆಯಿರದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದಂತರಂಗದ ಪ್ರಾಣಜೀವಾಳವೆ
ಜಗದಿಚ್ಛೆಸಲಿಸುವ ಶಿವಕೃಷಿಕ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅವ್ವಯಿ ಅನುಪಮ ಸುವಿಚಾರಿ ಶಿವಜ್ಞಾನಿ
ಭಕ್ತಿ ಶಿವಾಭರಣ ಇಹಪ್ರೇಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತನ ಶ್ರೀತನುವೆ ಶಿವನ ಆಲಯವೆಂಬ
ಭಕ್ತಿಲೋಕದ ಅರಸ ನನ್ನಸ್ವಾಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಹಪರದ ಪರಿಯನು ನೀನೇ ಬಲ್ಲೆ ತಂದೆ
ಇಹಪರ ನಿಚ್ಚಣಿಕೆಯಾಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**





## ಅಸ್ಮಿತಾ



**- ಶ್ರೀ ಸಿದ್ಧೇಶ್ವರ ಸ್ವಾಮಿಗಳು ***

**ಪ**ರಮ 'ಆತ್ಮ' ತತ್ತ್ವವನ್ನು ಬೌದ್ಧಿಕವಾಗಿ ಅರಿತುಕೊಳ್ಳುವವರು ತತ್ತ್ವಜ್ಞಾನಿಗಳು. ಅದೇ ಆತ್ಮತತ್ತ್ವವನ್ನು ಭಾವನಾತ್ಮಕವಾಗಿ ಅನುಭವಿಸುವವರು ತತ್ತ್ವಾನುಭಾವಿಗಳು. ತತ್ತ್ವಜ್ಞಾನಿಯಾಗಲು ಬುದ್ಧಿ ಚುರುಕಾಗಿರಬೇಕು. ಹಲವಾರು ಶಾಸ್ತ್ರಗಳಲ್ಲಿ ತರಬೇತಿ ಪಡೆದಿರಬೇಕು. ತತ್ತ್ವಾನುಭವಿಯಾಗಲು ಸತ್ಯಸಾಕ್ಷಾತ್ಕಾರದ ತೀವ್ರ ಹಂಬಲವಿದ್ದರೆ ಸಾಕು. ತತ್ತ್ವಜ್ಞಾನಿಗಳು ವಿಜ್ಞಾನಿಗಳಿದ್ದಂತೆ. ತತ್ತ್ವಾನುಭವಗಳು ಕವಿಗಳಿದ್ದಂತೆ. ವಿಜ್ಞಾನಿಯು ಯಾವುದೇ ವಸ್ತುವನ್ನು ಕಂಡಾಗ ಅದರ ರೂಪು ರಚನೆ, ಇತಿಹಾಸ ಮೊದಲಾದುವುಗಳನ್ನು ಸವಿಸ್ತಾರವಾಗಿ ತಿಳಿದ ಬಳಿಕ ಸಂತಸಪಡುತ್ತಾನೆ. ಆದರೆ ಕವಿಯು ಆ ವಸ್ತುವನ್ನು ಕಂಡಾಕ್ಷಣವೇ ಅದರಲ್ಲಿ ತನ್ಮಯನಾಗಿ ಆನಂದಿಸುತ್ತಾನೆ!

ಒಂದು ಕುಟುಂಬ. ಇಬ್ಬರು ಆದರ್ಶ ದಂಪತಿಗಳು. ಒಂದು ದಿನ ಪತಿಯು 'ನಾನು ಸಾಗರವನ್ನು ನೋಡಿ ಬರುತ್ತೇನೆ' ಎಂದು ಹೇಳಿಹೋದ. ಅದು ಪೂರ್ವದ ಕಾಲ. ಹಲವು ದಿನಗಳವರೆಗೆ ನಡೆದು ಆತ ಸುವಿಶಾಲ ಸಾಗರ ತಲುಪಿದ. ಸಾಗರದ ಭವ್ಯತೆ ದಿವ್ಯತೆ ಕಂಡು ಸಂತಸಗೊಂಡು ಮರಳಿದ. ಮನೆಯಲ್ಲಿ ಸತಿಯು ಕುತೂಹಲದಿಂದ ಪತಿಯ ದಾರಿ ಕಾಯುತ್ತಿದ್ದಳು. ಪತಿಯು ಮನೆಗೆ ಬರುವುದೇ ತಡ, ಸತಿಯು ಕೇಳಿದಳು, 'ನೀವು ಸಾಗರವನ್ನು ನೋಡಿ ಬಂದಿರಾ?' 'ಹೌದು' ಎಂದ ಪತಿ. 'ಆ ಸಾಗರದ ಆಳ, ಅಗಲ, ವಿಸ್ತಾರವನ್ನೆಲ್ಲ ನನಗೆ ವಿವರಿಸಿ ಹೇಳಿರಿ.' ಎಂದಳು ಸತಿ. 'ಅದು ಯಾವುದೂ ನನಗೆ ಗೊತ್ತಿಲ್ಲ!' ಎಂದ ಪತಿ. ಹಾಗಾದರೆ ನೀವು ಅಷ್ಟು ದೂರದ ಸಾಗರಕ್ಕೆ ಹೋದದ್ದಾದರೂ ಏತಕ್ಕೆ?' ಎಂದು ಸತಿಯು ಅಚ್ಚರಿಯಿಂದ ಕೇಳಿದಳು. 'ನಾನು ಸಾಗರಕ್ಕೆ ಹೋದದ್ದು ಅದನ್ನು ಅಳೆಯಲಿಕ್ಕಲ್ಲ; ಅನುಭವಿಸಲು, ಆನಂದಿಸಲು!' ಎಂದು ಪತಿಯು ಅರ್ಥಪೂರ್ಣವಾಗಿ ಹೇಳಿದ. ಅದನ್ನು ಕೇಳುತ್ತಲೇ ಸತಿಯ ಮನದಲ್ಲಿ ತಿಳಿವಿನ ಬೆಳಕು ಮೂಡಿತು!

ಒಬ್ಬ ವೈಜ್ಞಾನಿಕ ಸಂತ ಹೇಳುತ್ತಾನೆ-'ಮನುಷ್ಯನೇ, ವಿಶಾಲ ಆಗಸದಲ್ಲಿ ಕಣ್ಣಾಡಿಸು. ಅಲ್ಲಿ ಹೊಳೆಯುವ ನಕ್ಷತ್ರಗಳ ಸೊಬಗನ್ನು ಕಂಡು ಸವಿದು ಸಂತಸಪಡು!' ಆದರೆ ಸಾಮಾನ್ಯ ಮನುಷ್ಯ ಮಾಡುವುದೇನು? ಭೂಮಿ-ಸೀಮೆ, ಸಿರಿ-ಸಂಪದ, ಕೆರೆ-ಕಟ್ಟೆ, ಗಿಡ-ಮರ, ಧನ-ಕನಕ ಮೊದಲಾದವು ಎಣಿಸಿ-ಗುಣಿಸಿದ ಕೂಡಿಸಿ-ಕಳೆದ. ಪ್ರಾಪಂಚಿಕ ಅಸಂಖ್ಯ ವ್ಯವಹಾರಗಳಲ್ಲಿ ಮುಳುಗಿದ ಮನುಷ್ಯನಿಗೆ ಸೃಷ್ಟಿ ಸೌಂದರ್ಯ ಸವಿಯಲು ಸಮಯವೆಲ್ಲಿದೆ?

ಯಾವುದೇ ವಸ್ತುವನ್ನು ವಿಜ್ಞಾನಿಯಾಗಿ, ತತ್ತ್ವಜ್ಞಾನಿಯಾಗಿ ವಿಮರ್ಶಿಸಲು ಪರಾಮರ್ಶಿಸಲು ವಯಸ್ಸು, ಅನುಭವ, ಅಭ್ಯಾಸ, ಎಲ್ಲಾ ಬೇಕಾಗುತ್ತದೆ. ಆದರೆ ಅದೇ ವಸ್ತುವನ್ನು ಏನೂ ಅರಿಯದ ಮುಗ್ಧ ಬಾಲಕನೂ ಅನುಭವಿಸಿ ಆನಂದಿಸಬಲ್ಲ. ಮಳೆಗಾಲದ ತುಂತುರ ಹನಿಗಳು ಉದುರುತ್ತಿದ್ದರೆ ಸಾಕು. ಬಾಲಕರು ತಮ್ಮ ಬಟ್ಟೆ-ಬರೆ ಯಾವುದನ್ನೂ ಲೆಕ್ಕಿಸದೆ ಆ ಮಳೆಯ ಮುತ್ತಿನ ಹನಿಗಳಿಗೆ ತಮ್ಮ ಮೈ ಒಡ್ಡುತ್ತಾರೆ. ಕೇಕೆ ಹಾಕಿ ಕುಣಿದು ಕುಪ್ಪಳಿಸುತ್ತಾರೆ! ಸ್ವರ್ಗಸೌಖ್ಯವನ್ನೇ ಅನುಭವಿಸುತ್ತಾರೆ!

ಶಕ್ತಿ-ಸಾಮರ್ಥ್ಯ ಉಳ್ಳವರು ಹಲವಾರು ವರ್ಷ ಕಷ್ಟ ಪಟ್ಟು ಮನೆ-ಮಹಲು, ಮಠ-ಮಂದಿರಗಳನ್ನು ಕಟ್ಟುತ್ತಾರೆ. ಅದನ್ನು ನೋಡಿ ಸಂತಸಪಡಲು ಏನು ಕಷ್ಟ. ಕಟ್ಟಿದವರು ಎಲ್ಲರೂ ನಮ್ಮವರೆಂಬ ಸದ್ಭಾವ ಒಂದಿದ್ದರೆ ಸಾಕಲ್ಲವೇ? ಬಸವಣ್ಣನವರಾದರೂ ಉಳ್ಳವರಿಗೆ ಶಿವಾಲಯ ಕಟ್ಟಲು ಬಿಟ್ಟರು. ತಾವು ನಮ್ಮ ದೇಹವನ್ನೇ ದೇಗುಲವಾಗಿಸಿದರು. ಜಗದಗಲ ಮುಗಿಲಗಲವಾಗಿ ಬೆಳೆದರು. ಕೂಡಲಸಂಗನ ಕೂಡಿದರು. ಪರಮಾನಂದದ ಕಡಲೊಳು ಓಲಾಡಿದರು!

ಕಾಳಿದಾಸರಂಥ ಶ್ರೇಷ್ಠ ಕವಿಗಳು ಹಿಮಾಲಯದ ಹತ್ತಿರ ಗುಡ್ಡ ಬೆಟ್ಟಗಳ, ಹಳ್ಳ-ಕೊಳ್ಳಗಳ ಮಧ್ಯದಲ್ಲಿ ವಾಸಿಸಿದರು. ಅಲ್ಲಿ ಮುಗಿಲೆತ್ತರದ ಬೆಟ್ಟಗಳು, ತೇಲುವ ಘನ ಮೇಘಗಳು, ಹಸಿರಿನ ವನಸಿರಿ, ಅದನ್ನೆಲ್ಲ ಕಂಡು ಮೈಮರೆತರು ಆನಂದ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಪುಳಕಿತರಾದರು! ಅದನ್ನೇ ಸುಮಧುರ ಶಬ್ದಗಳಲ್ಲಿ ಸೆರೆ ಹಿಡಿದರು; ಅಮರ ಕಾವ್ಯಗಳೇ ನಿರ್ಮಾಣವಾದವು!

ಈ ಪ್ರಪಂಚದಲ್ಲಿರುವ ಪರಮಸತ್ಯವನ್ನಾದರೂ ಅನುಭವಿಸಿ ಆನಂದಿಸುವುದು ಅಷ್ಟೇ ಸರಳ-ಸಹಜ! ಅದಕ್ಕಾಗಿ ನಾವು ಸತ್ಯದರ್ಶಿಗಳಾದ ಸಂತರ-ಶರಣರ ನುಡಿಗಳನ್ನು ನಿತ್ಯ ಆಲಿಸಬೇಕು. ಅವರ ನುಡಿಗಡಣದಲ್ಲಿ ಸತ್ಯದ ಸವಿಯಿದೆ. ಸಕ್ಕರೆ ಸ್ವದೇಶದ್ದಾದರೇನು, ವಿದೇಶದ್ದಾದರೇನು, ಸವಿ ಒಂದೇ! ಸಂತರು, ಮಹಂತರು ಯಾರಾದರೇನು, ಅವರ ಸದುಪದೇಶ ಒಂದೇ! ಅದರಿಂದ ಅವಿದ್ಯಾಕತ್ತಲೆ ಕಳೆಯುತ್ತದೆ. ಸುಜ್ಞಾನದ ಸುಮಧುರ ಬೆಳಕು ಬದುಕನ್ನು ತುಂಬಿಕೊಳ್ಳುತ್ತದೆ. ಜೀವನದಲ್ಲಿ ಶಾಂತಿ, ಸಮಾಧಾನ ನೆಲೆಸುತ್ತವೆ!

ದೇಹಾದಿ ವಿಷಯಗಳಲ್ಲಿ ಬೆರೆತು ಅದೇ 'ನಾನು' ಎಂದು ಭಾವಿಸುವುದೇ 'ಅಸ್ಮಿತಾ' ನಾನು ಸ್ತ್ರೀ-ಪುರುಷ, ಸಿರಿವಂತ-ಬಡವ ಶಕ್ತಿವಂತ-ಬುದ್ಧಿವಂತ ಎಂದು ಮುಂತಾಗಿ ಹೇಳುತ್ತೇವೆ. ಅದೆಲ್ಲವೂ ಅಜ್ಞಾನದಿಂದ ಉಂಟಾದ ಅಸ್ಮಿತಾ ಭಾವವೇ ಆಗಿದೆ. ನಿಜವಾಗಿಯೂ 'ನಾನಾರು?' ಎಂಬ ಚಿಂತನೆಗೆ ನಾವು ತೊಡಗಬೇಕು. ಆಗ ನಮ್ಮ ಆತ್ಮದ ಅರಿವು ನಮಗಾಗುತ್ತದೆ. ಅಸ್ಮಿತವಾದ ಭಾವವು ತನಗೆ ತಾನೇ ಅಳಿದು ಹೋಗುತ್ತದೆ.

ಈ ಹೂವನ್ನು ನಾನು ನೋಡುತ್ತೇವೆ. ಆದ್ದರಿಂದ ಈ ಹೂವು ಬೇರೆ, ನಾನು ಬೇರೆ, ಹಾಗೆಯೇ ನನ್ನ ದೇಹವನ್ನೂ ನಾವು ನೋಡುತ್ತೇವೆ. ಆದ್ದರಿಂದ ಈ ದೇಹವೇ ಬೇರೆ, ನಾನೇ ಬೇರೆ! ಅದೇ ರೀತಿ ನನ್ನ ಮನ-ಬುದ್ಧಿ-ಭಾವಗಳನ್ನೂ ನಾನು ಅರಿಯುತ್ತೇನೆ. ನನ್ನಿಂದ ನೋಡಲ್ಪಡುವ, ಅರಿಯಿಸಿಕೊಳ್ಳುವ ಇವು ಯಾವೂ ನಾನಲ್ಲ. ಹೀಗೆ ಈ ತನು-ಮನ ಮೊದಲಾದವೆಲ್ಲ ನಾನಲ್ಲ. ಈಗ ನಾನು ಸ್ತ್ರೀಯಲ್ಲ, ಪುರುಷನಲ್ಲ, ಬಡವನಲ್ಲ-ಸಿರಿವಂತನಲ್ಲ, ಬುದ್ಧಿವಂತನಲ್ಲ-ಬುದ್ಧಿಹೀನನಲ್ಲ! ನಾನು ಕೇವಲ ಪರಿಶುದ್ಧಾತ್ಮನು. ಈ ಅರಿವು ಉಂಟಾದಾಗ ನಮ್ಮಲ್ಲಿ ಸಿರಿ-ಸಂಪದ, ವಿದ್ಯಾ-ಬುದ್ಧಿ ಎಲ್ಲವೂ ಇರುತ್ತದೆ. ಆದರೆ ಅದರ ಅಮಲು ಅಸ್ಮಿತಾ ಇರುವುದಿಲ್ಲ!

ನ್ಯೂಟನ್ ಶ್ರೇಷ್ಠ ವಿಜ್ಞಾನಿ. ಅವನು ಕಂಡುಹಿಡಿದ 'ಗುರುತ್ವಾಕರ್ಷಣ' ಶಕ್ತಿಯನ್ನು ಜಗತ್ತೆಲ್ಲ ಕೊಂಡಾಡಿತು. ಒಂದು ದಿನ ಓರ್ವ ಮಹಿಳೆಯು ನ್ಯೂಟನ್ನನಿಗೆ ಹೇಳಿದಳು. 'ನೀವು ಜಗತ್ಪ್ರಸಿದ್ಧ ವಿಜ್ಞಾನಿಗಳು. ಬಹುಶಃ ನಿಮಗೆ ಗೊತ್ತಿಲ್ಲದ್ದು ಈ ಜಗತ್ತಿನಲ್ಲಿ ಯಾವುದೂ ಇರಲಿಕ್ಕಿಲ್ಲ!' ನ್ಯೂಟನ್ ಹೇಳಿದರು -'ಸಾಗರದ ದಡದಲ್ಲಿ ಮಕ್ಕಳು ಒಂದೆರಡು ಹರಳುಗಳನ್ನು ಎತ್ತಿಕೊಂಡು ಸಂತಸಪಡುತ್ತಾರೆ. ನಾನಾದರೂ ಜ್ಞಾನ ಸಾಗರದ ದಡದಲ್ಲಿ ಇರುವ ಒಂದೆರಡು ವಿಷಯಗಳನ್ನು ತಿಳಿದುಕೊಂಡ ಬಾಲಕನಷ್ಟೇ!' ನ್ಯೂಟನ್‌ರದು ಅಸ್ಮಿತಾ ರಹಿತ ಬದುಕು.

ಓರ್ವ ಸಂತನ ಬಳಿ ಒಬ್ಬ ರಾಜನು ಹೋದ. 'ನಾನಾರು, ನಿಮಗೆ ಗೊತ್ತೆ' ಎಂದು ಸಂತನಿಗೆ ಕೇಳಿದ. 'ನನಗೆ ಗೊತ್ತಿಲ್ಲ!' ಎಂದ ಸಂತ. 'ನಾನು ಈ ದೇಶದ ಚಕ್ರವರ್ತಿ!' ಎಂದ ರಾಜ. ಅಷ್ಟೇ ಸಮಾಧಾನದಿಂದ ಸಂತ ಕೇಳಿದ. 'ಎಷ್ಟು ವರ್ಷಗಳಿಂದ?' ರಾಜ-'ಹದಿನೈದು ವರ್ಷಗಳಿಂದ'. ಸಂತ - 'ಅದಕ್ಕೂ ಮೊದಲು ನೀನೇನು ರಾಜನಾಗಿರಲಿಲ್ಲ!' ರಾಜ - 'ಹೌದು'. ಸಂತ -'ಈಗಲಾದರೂ ನೆರೆಹೊರೆಯ ರಾಜರಿಂದ ಅಕಸ್ಮಾತ್ ಸೋಲಿಸಲ್ಪಟ್ಟರೆ ನೀನೇನು ಚಕ್ರವರ್ತಿಯಾಗಿರುವುದಿಲ್ಲ'. ರಾಜ- 'ಹೌದು'.

ಸಂತ - 'ಹಾಗಾದರೆ ನೀನು ಚಕ್ರವರ್ತಿ ಎಂಬುವುದು ಎಷ್ಟು ಸತ್ಯ?' ಸಂತರ ಈ ನುಡಿಗಳನ್ನು ಕೇಳುತ್ತಲೇ ರಾಜನ ಮನದಲ್ಲಿ ಅಸ್ಮಿತೆಯ ಭಾವ ಅಳಿದಿತ್ತು. ಅರಿವಿನ ರವಿ ಮೂಡಿದ್ದ!

ನಾವು ರಾಜರು, ಮಂತ್ರಿಗಳು, ಸಿರಿವಂತರು ಎಂದು ಏನೇನೋ ಭಾವಿಸಿ ಅಸ್ಮಿತೆಯ ಅಮಲಿನಲ್ಲಿ ಇರುತ್ತೇವೆ. ಆದರೆ ಅವೆಲ್ಲವೂ ಬಂದು ಹೋಗುವ ಕ್ಷಣಿಕ ಅವಸ್ಥೆಗಳು ಎನ್ನುವುದನ್ನು ಮರೆಯುತ್ತೇವೆ. ಭವಬಂಧನಕ್ಕೆ ಒಳಗಾಗುತ್ತೇವೆ. ಮೋಳಿಗೆಯ ಮಾರಯ್ಯನವರು ಕಲ್ಯಾಣದಲ್ಲಿ ಕಟ್ಟಿಗೆ ಹೊತ್ತು ಮಾರಿ ಶರಣ ಜೀವನ ಸಾಗಿಸಿ ಸಂತಸದಿಂದ ಇದ್ದರು. ಅದಕ್ಕೆ ಮೊದಲು ಅವರೇ ಭೂಲೋಕದ ನಂದನವನ ಎನಿಸಿದ ಕಾಶ್ಮೀರ ದೇಶದ ಮಹಾರಾಜರಾಗಿದ್ದರು. ಈಗ ಅವರಿಗೆ ಅದರ ಭಾವವೇ ಇರಲಿಲ್ಲ. ಅಸ್ಮಿತೆಯನ್ನುಳಿದು ಆತ್ಮಸ್ಥರಾಗಿದ್ದರು!

ಮನುಷ್ಯನು ತನ್ನನ್ನು ತಾನು ಅರಿಯಬೇಕು. ಆಗ ತನು-ಮನ, ಬುದ್ಧಿ-ಭಾವಗಳ ಅಹಮಿಕೆ ಅಳಿಯುತ್ತದೆ. ಸಿರಿತನ-ಬಡತನ, ಮೇಲು-ಕೀಳು ಮೊದಲಾದ ಭ್ರಮೆ ನಿರಸನವಾಗುತ್ತದೆ. ಜೀವನದಲ್ಲಿ ಮಾನ-ಅಪಮಾನ, ಜಯ-ಅಪಜಯ ಏನೇ ಬಂದರೂ ಮನದಲ್ಲಿ ಸ್ಥಿರಶಾಂತಿ ನೆಲೆಸಿರುತ್ತದೆ. ಅದು ಅಸ್ಮಿತೆಯನ್ನಳಿದ ಜೀವನಯೋಗ! ❑







# ಮೋಕ್ಷ ನಿರ್ವಾಣ ಮತ್ತು ಲಿಂಗಾಂಗ ಸಾಮರಸ್ಯ

- ಬಾಲಚಂದ್ರ ಜಯಶೆಟ್ಟಿ *

**ಸ್ಥೂ**ಲವಾಗಿ ನೋಡಿದರೆ ಮೋಕ್ಷ, ಮುಕ್ತಿ, ನಿರ್ವಾಣ, ಕೈವಲ್ಯ ಲಿಂಗಾಂಗಸಾಮರಸ್ಯ ಮುಂತಾದ ಪದಗಳು ಸಮಾನಾರ್ಥಿ ಅಥವಾ ಪರ್ಯಾಯವಾಚಿ ಪದಗಳಂತೆ ಕಾಣುತ್ತವೆ. ಆದರೆ, ದರ್ಶನದ ಕ್ಷೇತ್ರದಲ್ಲಿ ಇವುಗಳಿಗೆ ವಿಭಿನ್ನವಾದ ಅರ್ಥಗಳಿವೆ, ಸಂಕಲ್ಪಗಳಿವೆ ಅಥವಾ ಇವುಗಳ ಪರಿಕಲ್ಪನೆಗಳೇ ಭಿನ್ನವಾಗಿವೆ ಎಂದೂ ಹೇಳಬಹುದು. ಈ ಎಲ್ಲ ಪರ್ಯಾಯ ಪದಗಳಿಗೆ ವ್ಯಾವಹಾರಿಕವಾಗಿ 'ಮೋಕ್ಷ' ಪದವನ್ನು ಬೀಜರೂಪವಾಗಿ ಗ್ರಹಿಸಿದರೆ ಯೋಗವಾಸಿಷ್ಠದ ಈ ಕೆಳಕಂಡ ಶ್ಲೋಕವನ್ನು ಎಲ್ಲ ದರ್ಶನಗಳ ದೃಷ್ಟಿಯ ಕ್ರೋಢೀಕರಣವೆಂದು ಹೇಳಬಹುದು. ಆ ಶ್ಲೋಕ ಈ ರೀತಿಯಾಗಿದೆ.

*ನ ಮೋಕ್ಷೋ ನಭಸಃ ಪೃಷ್ಠೇ ನ ಪಾತಾಲೇ ನ ಭೂತಲೇ*
*ಮೋಕ್ಷೋ ಹಿ ಚೇತೋ ವಿಮಲಂ ಸಮ್ಯಗ್ಜ್ಞಾನವಿಬೋಧಿತಮ್ ॥*

ಇದರ ಸ್ಥೂಲವಾದ ಅರ್ಥ ಈ ರೀತಿಯಾಗಿದೆ. 'ಮೋಕ್ಷದ ಮೂಟೆಯನ್ನು ಯಾರೂ ಆಕಾಶದಲ್ಲಿ ಇಟ್ಟಿಲ್ಲ ಅಥವಾ ಪಾತಾಳದಲ್ಲಿ ಬಚ್ಚಿಟ್ಟಿಲ್ಲ ಅಥವಾ ಭೂಮಂಡಲವನ್ನು ತಡಕಾಡಿ ಹುಡುಕಿದರೂ ಸಿಗುವಂಥ ವಸ್ತು ಅದು ಅಲ್ಲ. ವಾಸ್ತವವಾಗಿ ನಿರ್ಮಲತೆ, ಸಮುಚಿತವಾದ ಜ್ಞಾನದ ಮೂಲಕ ಮತ್ತು ಅದಕ್ಕೆ ಅನುರೂಪವಾಗಿ ಮಾಡುವ ಕರ್ಮಗಳ ಮೂಲಕ ಅದು ಪ್ರಾಪ್ತವಾಗುತ್ತದೆ.

ಮೋಕ್ಷದ ಕುರಿತು ಸರಳವಾದ ಮಾತುಗಳಲ್ಲಿ ತಿಳಿಸಲು ಇರುವ ಅನೇಕ ವಿಧಾನಗಳಲ್ಲಿ ಈ ವಿವರಣೆಯೂ ಕೂಡ ಒಂದು ವಿಧಾನವಾಗಿದೆ. ಆದರೆ, ಇಲ್ಲಿ ನಮಗೆ ಮೋಕ್ಷ, ನಿರ್ವಾಣ ಮತ್ತು ಲಿಂಗಾಂಗ ಸಾಮರಸ್ಯ ಈ ಸಂಕಲ್ಪನೆಗಳಿಗೆ ವಿಭಿನ್ನವಾದ ಅರ್ಥಗಳಿವೆ. ಮೋಕ್ಷದ ಕುರಿತು ಅದ್ವೈತ ದರ್ಶನದಲ್ಲಿ ಹೇಳಲಾದ ಅರ್ಥವು ವಿಶಿಷ್ಟಾದ್ವೈತದಲ್ಲಿ ಭಿನ್ನವಾಗಿದೆ; ದ್ವೈತ ಮತದ್ದು ತನ್ನದೆಯಾದ ದೃಷ್ಟಿಕೋನವಿದೆ. ಈ ವಿಷಯವಾಗಿ ಷಡ್ದರ್ಶನಗಳಲ್ಲಿಯೂ ಒಮ್ಮತ ಕಂಡುಬರುವುದಿಲ್ಲ. ಈ ಎಲ್ಲ ದಾರ್ಶನಿಕರ ಮತ್ತು ಚಿಂತಕರ ಎದುರಿಗೆ ಇದ್ದ ಒಂದೇ ಒಂದು ಮಹತ್ವದ ಪ್ರಶ್ನೆಯೆಂದರೆ ಸತ್ತ ಮೇಲೆ ಮನುಷ್ಯನು ಎಲ್ಲಿಗೆ ಹೋಗುತ್ತಾನೆ ಎಂಬುದು. ವೈದಿಕ ಆರ್ಯರ ಮಂತವ್ಯದಂತೆ ಸಾವು ಎಂದರೆ ಜೀವನದ ಅಂತ್ಯವಲ್ಲ. ಕಠೋಪನಿಷತ್ತಿನ ಯಮ ಮತ್ತು ನಚಿಕೇತನ ಕಥೆಯು ಈ ವಿಷಯವಾಗಿ ಒಂದಿಷ್ಟು ಬೆಳಕು ಚೆಲ್ಲುತ್ತದೆ. ತರ್ಕದ ಮೂಲಕ ಈ ಪ್ರಶ್ನೆಯು ಉತ್ತರ ಕಂಡುಕೊಳ್ಳಲಾಗುವುದಿಲ್ಲ ಎಂದೂ ಆತ್ಮಜ್ಞಾನದ ಮೂಲಕ ಅದನ್ನು ಅನುಭವಿಸಬಹುದಾಗಿದೆ ಎಂದೂ ಯಮ ಹೇಳುತ್ತಾನೆ. ನಚಿಕೇತ ಕೇಳುತ್ತಾನೆ-ಹಾಗಾದರೆ ಈ ಆತ್ಮ ಎನ್ನುವುದು ಇರುವುದಾದರೂ ಏನು? ಯಮ ಹೇಳುತ್ತಾನೆ, 'ಆತ್ಮವು ಯಾವತ್ತೂ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಅದು ಇಂಥ ವಸ್ತುವಿನಿಂದ ನಿರ್ಮಾಣವಾಗಿದೆ ಎಂದು ಹೇಳುವುದು ತಪ್ಪಾಗುತ್ತದೆ. ಯಾಕೆಂದರೆ ಅದು ಜನ್ಮಾತೀತ. ನಿತ್ಯ ಮತ್ತು ಶಾಶ್ವತವಾಗಿದೆ. ದೇಹದ ಮೇಲೆ ಮಾರಣಾಂತಿಕ ಹಲ್ಲೆ ಮಾಡಿದರೂ ಆತ್ಮದ ನಾಶವಾಗುವುದಿಲ್ಲ' ವೇದಾಂತದ ಎಲ್ಲ ಆಚಾರ್ಯರ ಹೇಳಿಕೆಯು ಹೆಚ್ಚೂ ಕಡಿಮೆ ಇದೇ ಆಗಿದೆ.

ಆತ್ಮವು ನಿತ್ಯವಾಗಿದೆ ಎಂದು ನಾವು ಒಂದು ವೇಳೆ ಒಪ್ಪಿಕೊಂಡರೆ ದೇಹವು ನಷ್ಟವಾದ ಮೇಲೆ ಅಂದರೆ ಸತ್ತ ಮೇಲೆ ಅದು ಎಲ್ಲಿಗೆ ಹೋಗುತ್ತದೆ ಎಂಬ ಪ್ರಶ್ನೆ ಎದುರಾಗುತ್ತದೆ. ಉಪನಿಷತ್ತುಗಳಲ್ಲಿ ಮನುಷ್ಯಲೋಕ, ಪಿತೃಲೋಕ ಮತ್ತು ದೇವಲೋಕ ಎಂಬ ಕೇವಲ ಮೂರೇ ಲೋಕಗಳಿವೆ ಎಂದು ಹೇಳಿದೆ. ಪುತ್ರನ ಸಂಯೋಗದಿಂದ ಮನುಷ್ಯಲೋಕ, ಕರ್ಮಗಳಿಗೆ ಅನುಸರಿಸಿ ಪಿತೃಲೋಕ ಮತ್ತು ಜ್ಞಾನ ಪ್ರಾಪ್ತಿಯಿಂದ ದೇವಲೋಕಗಳು ದೊರೆಯುತ್ತವೆ. ಮನುಷ್ಯಲೋಕದಲ್ಲಿ ದೇಹದ ಅವಸಾನವಾದ ಕೂಡಲೆ ಆತ್ಮವು ಉಳಿದ ಎರಡು ಲೋಕಗಳಲ್ಲಿ ಯಾವುದಾದರೊಂದು ಲೋಕದತ್ತ ಪಯಣಿಸುತ್ತದೆ. ಮತ್ತೆ

* 'ನಮ್ಮ ಮನೆ', ಜಯನಗರ, ಸೇಡಂ ರಸ್ತೆ, ಕಲಬುರಗಿ-೫೮೫ ೧೦೫. ಮೊ : 9945215054

ಆ ಲೋಕದಿಂದ ಹಿಂದಿರುಗಿ ಬರುವುದಿಲ್ಲ. ಅಲ್ಲಿಯೇ ಸ್ಥಿರವಾಗಿರುತ್ತದೆ. ಯಜ್ಞ-ಯಾಗಾದಿಗಳನ್ನು ಮಾಡುವ ಜನರ ಆತ್ಮಗಳು ಪಿತೃಯಾನದಲ್ಲಿ ಆರೂಢವಾಗಿ ಚಂದ್ರಲೋಕಕ್ಕೆ ಹೋಗುತ್ತವೆ ಮತ್ತು ಪುಣ್ಯವು ಕ್ಷಯವಾಗುವವರೆಗೆ ಅಲ್ಲಿ ವಾಸವಾಗಿರುತ್ತದೆ. ಆಮೇಲೆ ಮತ್ತೆ ಮನುಷ್ಯ ಜನ್ಮವನ್ನು ಧರಿಸಿ ಭೂಲೋಕಕ್ಕೆ ಬರುತ್ತವೆ. ದುಷ್ಕೃತ್ಯಗಳನ್ನು ಮಾಡಿದವರ ಆತ್ಮಗಳು ತಿರುಗಿ ಮನುಷ್ಯ ಜನ್ಮಕ್ಕೆ ಬಂದು ನಾನಾ ಜೀವಕೋಟಿಗಳ ಯೋನಿಯಲ್ಲಿ ಜನ್ಮ ಪಡೆಯುತ್ತವೆ.

ಜೈನರನ್ನು ನಿರೀಶ್ವರವಾದಿಗಳೆಂದು ಕರೆಯುವುದಾದರೂ ಮೋಕ್ಷದ ಬಗ್ಗೆ ಅವರದೆಯಾದ ಭಿನ್ನವಾದ ಸಂಕಲ್ಪಗಳಿವೆ. ಯಾವಾಗ ಎಲ್ಲ ಕರ್ಮಗಳು ಸಮೂಲವಾಗಿ ನಾಶವಾಗಿ ಹೊಸ ಕರ್ಮಗಳ ಉತ್ಪತ್ತಿ (ಆಸ್ರವ)ವು ಸ್ಥಗಿತವಾಗುವವೋ ಅದೇ ಮೋಕ್ಷಾವಸ್ಥೆಯಾಗಿರುತ್ತದೆ. ಕರ್ಮದ ಎಲ್ಲ ಬಂಧನಗಳು ಕಡಿದು ಹೋಗುವುದರಿಂದ ಜೀವವು ತನ್ನ ಸಹಜವಾದ ಸ್ವಾಭಾವಿಕ ಊರ್ಧ್ವಗತಿಯ ಮೂಲಕ ಲೋಕಾಕಾಶದ ಸೀಮೆಯಲ್ಲಿ ಹೋಗಿ ಸ್ಥಿತವಾಗುತ್ತವೆ ಮತ್ತು ಅದು ಅಲ್ಲಿ ತನ್ನ ಮೂಲವಾದ ಅನಂತ ದರ್ಶನ, ಅನಂತ ಜ್ಞಾನ, ಅನಂತ ವೀರ್ಯ ಮತ್ತು ಅನಂತ ಸುಖದ ಸ್ಥಿತಿಯನ್ನು ಅನುಭವಿಸ ಹತ್ತುತ್ತದೆ. ಮೋಕ್ಷ ಪ್ರಾಪ್ತಿಯೇ ಜೀವಿಯ ಚರಮ ಸಿದ್ಧಿಯಾಗಿದೆ. ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಗ್ಚಾರಿತ್ರದಿಂದಲೇ ಮೋಕ್ಷದ ಹಾದಿ ರೂಪುಗೊಳ್ಳುತ್ತದೆ. ಈ ಮೂರನ್ನು ರತ್ನತ್ರಯವೆಂದು ಕರೆಯುತ್ತಾರೆ ಜೀವ, ಅಜೀವ, ಅಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ - ಈ ಏಳು ತತ್ತ್ವಗಳಲ್ಲಿ ಶ್ರದ್ಧೆಯನ್ನು ಹೊಂದಿರುವುದೇ ಸಮ್ಯಗ್ದರ್ಶನವಾಗಿದೆ. ಜೀವ ಮತ್ತು ಅಜೀವ ಈ ತತ್ತ್ವಗಳ ಬಗ್ಗೆ ಪರಿಪೂರ್ಣ ಮತ್ತು ನಿರ್ದಿಷ್ಟವಾದ ಅರಿವನ್ನು ಹೊಂದುವುದೇ ಸಮ್ಯಗ್ಜ್ಞಾನ ಎನಿಸುತ್ತದೆ ಸಮ್ಯಗ್ದರ್ಶನ ಮತ್ತು ಸಮ್ಯಗ್ಜ್ಞಾನ ಈ ಎರಡು ಸೇರಿ ಸಮ್ಯಗ್ಚಾರಿತ್ರವನ್ನು ಪೋಷಿಸುತ್ತವೆ. ಈ ರತ್ನತ್ರಯದ ಸಾಧನೆಯಿಂದಲೇ ಮೋಕ್ಷದ ಮಾರ್ಗ ತೆರೆದುಕೊಳ್ಳುತ್ತದೆ. ಇರಲಿ.

ಮೋಕ್ಷದ ಕುರಿತಾಗಿ ವೇದಾಂತ ದರ್ಶನದ ವಿಚಾರಪ್ರಣಾಲಿಯು ಹೆಚ್ಚಿನ ಮಹತ್ವ ಹೊಂದಿರುತ್ತದೆ. ವೇದಾಂತ ಪದದಿಂದ ಎರಡು ಅರ್ಥಗಳು ನಿಷ್ಪನ್ನವಾಗುತ್ತದೆ. ಮೊದಲನೆಯ ಅರ್ಥ-ಎಲ್ಲ ವೇದಗಳ ಅಧ್ಯಯನದ ನಂತರ ಹೊರಬೀಳುವ ನಿಷ್ಕರ್ಷಕ್ಕೆ ವೇದಾಂತ-ಸಿದ್ಧಾಂತ ಎಂದು ಕರೆಯಲಾಗುತ್ತದೆ. ಎರಡನೆಯ ಅರ್ಥ-ವೇದಗಳ ಕೊನೆಯಲ್ಲಿ ಅಂದರೆ ವೇದಗಳ ನಂತರ ನಿರ್ಮಾಣವಾದ ಉಪನಿಷತ್ತುಗಳಲ್ಲಿ ಅಡಕಗೊಂಡಿರುವ ಜ್ಞಾನವು ವೇದಾಂತವೆನಿಸುತ್ತದೆ. ಅನಂತರ ಉಪನಿಷತ್ ವಾಕ್ಯಗಳ ತತ್ತ್ವ ಮೀಮಾಂಸೆಯನ್ನು ಮಾಡುವ ವೇದಾಂತಸೂತ್ರ ಅಥವಾ ಬ್ರಹ್ಮಸೂತ್ರಗಳು ರಚಿತವಾದವು. ಆಮೇಲೆ, ಮಹಾಭಾರತದಲ್ಲಿ ಅಡಕಗೊಳಿಸಲಾಗುವ 'ಭಗವದ್ಗೀತೆ'ಯನ್ನೂ ಕೂಡ ಉಪನಿಷತ್ತು ಮತ್ತು ಬ್ರಹ್ಮಸೂತ್ರಕ್ಕೆ ಸರಿಸಮನಾದ ಮಹತ್ವ ಕೊಡಲಾಯಿತು. ಈ ಮೂರನ್ನು ವೇದಾಂತದ ಪ್ರಸ್ಥಾನ ತ್ರಯೀ ಎಂದು ಗುರುತಿಸಲಾಗುತ್ತದೆ. ಪ್ರಸ್ಥಾನದ ತಾತ್ಪರ್ಯ ಉಗಮ ಎಂದು. ವೇದಾಂತದ ಸಮಗ್ರ ವಿಚಾರಗಳ ಉಗಮವು ಇದೇ ಮೂರು ಕೃತಿಗಳಲ್ಲಿ ಗುರುತಿಸಲಾಗುತ್ತದೆ. ಅನಂತರ ಆಚಾರ್ಯರು ಇವೇ ಪ್ರಸ್ಥಾನ ತ್ರಯಿಗಳ ಕುರಿತು ತಮ್ಮ ತಮ್ಮ ದೃಷ್ಟಿಕೋನದಿಂದ ಭಾಷ್ಯಗಳನ್ನು ರಚಿಸಿದರು. ಇಲ್ಲಿ ರೋಚಕವಾದ ಸಂಗತಿಯೆಂದರೆ ಪ್ರಸ್ಥಾನತ್ರಯಿಯ ಮೂಲ ಪಾಠಗಳು ಒಂದೇಯಾಗಿದ್ದರೂ ಬೇರೆ ಬೇರೆ ಆಚಾರ್ಯರ ವಿಚಾರಧಾರೆಗಳು ಎಷ್ಟೊಂದು ಭಿನ್ನವಾಗಿವೆ ಎಂದರೆ ಅವುಗಳಲ್ಲಿ ಸಾಕಷ್ಟು ಮತಭೇದ ಕಂಡು ಬರುತ್ತದೆ. ಸಾಮಾನ್ಯವಾದ ಅಂಶಗಳೇನಾದರೂ ಕಂಡುಬರುವುದಾದರೆ ಅವು-ಬ್ರಹ್ಮವೆಂಬ ಚೈತನ್ಯ ತತ್ತ್ವದ ಮೂಲಕ ಈ ವಿಶ್ವದ ಪ್ರತಿಷ್ಠಾಪನೆಯಾಗಿದೆ. ಜಡತತ್ತ್ವದಿಂದ ಅಲ್ಲ; ಮೋಕ್ಷವೆಂಬುದು ಒಂದು ಪುರುಷಾರ್ಥವಾಗಿದ್ದು ಅದು ಪ್ರತಿಯೊಂದು ಜೀವಿಯ ಚರಮ ಸಾಧ್ಯವಾಗಿದೆ; ಆತ್ಮಸ್ವರೂಪದ ಸಾಕ್ಷಾತ್ಕಾರವಾದಾಗ ಮೋಕ್ಷವು ದೊರಕುತ್ತದೆ ಎಂಬ ವಿಚಾರಗಳಾಗಿವೆ. ವೇದಾಂತದ ಪ್ರಮುಖ ಆಚಾರ್ಯರು ಮತ್ತು ಅವರ ದರ್ಶನಗಳು ಈ ಕೆಳಗಿನಂತಿವೆ :

೧. ಶಂಕರಾಚಾರ್ಯ (ಕ್ರಿ.ಶ.೭೮೮-೮೨೦)
ಕೇವಲಾದ್ವೈತವಾದ

೨. ರಾಮಾನುಜಾಚಾರ್ಯ (ಕ್ರಿ.ಶ.೧೦೫೭-೧೧೩೭)
ವಿಶಿಷ್ಟಾದ್ವೈತವಾದ

೩. ಮಧ್ವಾಚಾರ್ಯ (ಕ್ರಿ.ಶ.೧೧೯೯-೧೨೭೮)
ದ್ವೈತವಾದ

೪. ವಲ್ಲಭಾಚಾರ್ಯ (ಕ್ರಿ.ಶ.೧೨೮೧-೧೩೩೩)
ಶುದ್ಧಾದ್ವೈತ (ಭೇದಾಭೇದ)ವಾದ





೫. ನಿಂಬಾರ್ಕಾಚಾರ್ಯ (ಕ್ರಿ.ಶ. ೧೩ನೆಯ ಶತಮಾನ)
ದ್ವೈತಾ ದ್ವೈತ

ಈ ಎಲ್ಲಾ ವೇದಾಂತಿಗಳಲ್ಲಿ ಶಂಕರಾಚಾರ್ಯರನ್ನು ಹೆಚ್ಚು ಪ್ರಖ್ಯಾತರೂ ಹಾಗೂ ಹೆಚ್ಚಿನ ಮಹತ್ವ ಉಳ್ಳವರೆಂದು ತಿಳಿಯಲಾಗುತ್ತದೆ. ಮೋಕ್ಷದ ಸಂಕಲ್ಪನೆಯು ಕುರಿತು ಇತಿ ಮಿತಿಯಲ್ಲಿ ಈ ಆಚಾರ್ಯರ ಮಂತವ್ಯಗಳ ಕುರಿತು ಒಂದಿಷ್ಟು ಚರ್ಚೆಯನ್ನು ಇಲ್ಲಿ ಮಾಡೋಣ.

'ಬ್ರಹ್ಮ ಸತ್ಯಂ, ಜಗನ್ಮಿಥ್ಯಾ, ಜೀವೋ ಬ್ರಹ್ಮೈವ ನಾ ಪರಃ' - ಅಂದರೆ ಬ್ರಹ್ಮ ಸತ್ಯವಾಗಿದೆ ಮತ್ತು ಜಗತ್ತು ಮಿಥ್ಯವಾಗಿದೆ; ಜೀವವು ಸ್ವತಃ ಬ್ರಹ್ಮವಾಗಿದೆ. ಬೇರೇ ಇನ್ನೇನೂ ಇಲ್ಲ. ಶಂಕರಾಚಾರ್ಯರ ಕೇವಲಾದ್ವೈತವಾದದ ಸಾರ ಸರ್ವಸ್ವವೂ ಈ ಹೇಳಿಕೆಯಲ್ಲಿ ಅಡಕವಾಗಿದೆ. ಹಾಗಂತೂ ಎಲ್ಲ ಚಿಂತನೆಗಳ ವಿಷಯವೆಂದರೆ -ಜೀವ, ಜಗತ್ತು ಮತ್ತು ಬ್ರಹ್ಮ ಆಗಿದೆ. ಈ ಮೂರರ ಸ್ವರೂಪವೇನು, ಇವುಗಳ ಪರಸ್ಪರ ಸಂಬಂಧವೇನು-ಎಂಬ ದೃಷ್ಟಿಕೋನದ ಮೇಲೆಯೇ ವಿವಿಧ ವಾದಗಳು ನಿಂತಿವೆ.

ಶಂಕರಾಚಾರ್ಯರ ಅಭಿಮತದಂತೆ ಬ್ರಹ್ಮವು ಏಕ ಮಾತ್ರ ಸತ್ಯವಾಗಿದೆ. ಉಳಿದುದೆಲ್ಲ ಮಿಥ್ಯೆ, ಇಡೀ ಜಗತ್ತೆ ಮಿಥ್ಯೆಯಾಗಿದೆ. ಜಗತ್ತಿನ ಮಿಥ್ಯಾತನದ ಕುರಿತು ಸಾಕಷ್ಟು ತರ್ಕವಿತರ್ಕಗಳು ನಡೆಯುತ್ತಾ ಬಂದಿವೆ. ನಮಗೆ ಅದರ ಆಳಕ್ಕೆ ಇಳಿಯಬೇಕಾಗಿಲ್ಲ. 'ಜೀವೋ ಬ್ರಹ್ಮೈವ' ಈ ಹೇಳಿಕೆಯ ಕುರಿತು ಸಂಕ್ಷಿಪ್ತವಾಗಿ ಇಲ್ಲಿ ಚರ್ಚಿಸಬೇಕಾದುದು ಅವಶ್ಯಕವಾಗಿದೆ. ಜಗತ್ತನ್ನು ಮಿಥ್ಯೆ ಎಂದು ನಂಬಿದ ಮೇಲೆ ಈ ಪ್ರಪಂಚದಲ್ಲಿ ಇನ್ನು ಏನು ಉಳಿಯುತ್ತದೆ. ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಮಹತ್ವದ ಅಂಶವೆಂದರೆ ಎಷ್ಟು ಖಡಾಖಂಡಿತವಾಗಿ ಜಗತ್ತನ್ನು ಮಿಥ್ಯೆ ಎಂದು ಘೋಷಿಸಲಾಗಿದೆಯೋ ಅಷ್ಟೇ ಅಧಿಕಾರ ವಾಣಿಯಿಂದ ಸಚ್ಚಿದಾನಂದಾತ್ಮಕವಾದ ಬ್ರಹ್ಮನನ್ನು ಸತ್ಯವೆಂದೂ ಹೇಳಲಾಗಿದೆ. ಆಗ ಏಳುವ ಪ್ರಶ್ನೆಯೆಂದರೆ ಆ ಬ್ರಹ್ಮ ಇರುವುದಾದರೂ ಎಲ್ಲಿ? ಇದಕ್ಕೆ ಅದ್ವೈತವಾದಿಗಳು ಕೊಡುವ ಉತ್ತರವೆಂದರೆ ಯಾವುದನ್ನು ನಾವು 'ನಾನು' ಅಥವಾ 'ಜೀವ' ಎಂದು ಕರೆಯುತ್ತೇವೆಯೋ ವಾಸ್ತವವಾಗಿ ಅದುವೇ ಬ್ರಹ್ಮವಾಗಿದೆ. ಇಲ್ಲಿ ಬಳಸಿರುವ 'ಜೀವ' ಪದವು ನಾವು ವ್ಯಾವಹಾರಿಕ ಬದುಕಿನಲ್ಲಿ ಬಳಸುವ ಸಾಮಾನ್ಯವಾದ ಜೀವವಲ್ಲ. 'ಜೀವೋ ಬ್ರಹ್ಮೈವ' ಎಂಬ ಹೇಳಿಕೆಯಲ್ಲಿಯ ಜೀವವನ್ನು ವಸ್ತು ಸ್ವರೂಪದ ದೃಷ್ಟಿಯಿಂದ ಆತ್ಮ, ಅಂತರಾತ್ಮ, ಪ್ರತ್ಯಗಾತ್ಮ ಅಥವಾ ಸಾಕ್ಷಿ ಎಂಬ ಪದಗಳಿಂದ ಗುರುತಿಸಲಾಗುತ್ತದೆ. ಆದರೆ ವ್ಯಾವಹಾರಿಕವಾಗಿ ನಾವು ಜೀವ ಎಂದು ಹೇಳುವ ತತ್ತ್ವವು ಸುಖ, ದುಃಖ ಮುಂತಾದ ಭಾವನೆಗಳಿಗೆ ವಿಷಯ ವಸ್ತುವಾಗುತ್ತದೆ. ಅದರ ಜಾಗೃತಿ, ಸ್ವಪ್ನ ಮತ್ತು ಸುಷುಪ್ತಿ ಎಂಬ ಅವಸ್ಥೆಗಳಿರುತ್ತವೆ. ಆತ್ಮವೆಂಬುದು ಇವೆಲ್ಲವುಗಳಿಂದ ತೀರ ಭಿನ್ನವಾಗಿರುತ್ತದೆ.

ಆದರೆ ಈ ಸತ್ಯ, ಶುದ್ಧವಾದ ಆತ್ಮದ ಮೇಲೆ ಒಂದರ ಮೇಲೊಂದರಂತೆ ಒಟ್ಟು ಐದು ಹೊದಿಕೆಗಳು ಅಥವಾ ಕೋಶಗಳು ಆವರಿಸಿರುತ್ತವೆ. ಈ ಕೋಶಗಳಿಂದ ಕೋಢೀಕೃತವಾದಾಗ ಆತ್ಮವು ತಾನು ಜೀವ ಎನಿಸುತ್ತದೆ ಮತ್ತು ಜೀವವನ್ನು ಕೋಶಗಳಿಂದ ಅಂದರೆ ಹೊದಿಕೆಗಳಿಂದ ಮುಕ್ತಗೊಳಿಸಿದರೆ ಆಗ ಕೇವಲ ಸತ್ಯಶುದ್ಧವಾದ ಆತ್ಮ ಮಾತ್ರ ಉಳಿಯುತ್ತದೆ. ಆತ್ಮದ ಮೇಲೆ ಮುಸುಕಿಕೊಂಡಿರುವ ಹೊದಿಕೆಗಳಲ್ಲಿ ಎಲ್ಲಕ್ಕಿಂತ ಹೊರಗಿನ ಮುಸುಕಿಗೆ ಅನ್ನಮಯ ಕೋಶ ಎಂದು ಕರೆಯುತ್ತಾರೆ. ಅನ್ನಮಯ ಕೋಶವೆಂದರೆ ನಮ್ಮ ಭೌತಶರೀರವಾಗಿದೆ. ಅನ್ನಮಯ ಕೋಶದ ಒಳಗೆ ಪ್ರಾಣಮಯ ಕೋಶವಿರುತ್ತದೆ. ಅದರ ಮೂಲಕ ದೇಹದಲ್ಲಿ ಸ್ಪಂದನೆ ಮುಂತಾದವುಗಳು ನಡೆಯುತ್ತವೆ. ಇಂದ್ರಿಯಗಳು ಕಾರ್ಯಕ್ಷಮತೆಯನ್ನು ಹೊಂದುತ್ತವೆ-ವಾಯು ರೂಪದ ಆ ಶಕ್ತಿಗೆ ಪ್ರಾಣ (Vital Self) ಎಂದು ಕರೆಯುತ್ತಾರೆ. ಪ್ರಾಣಮಯ ಕೋಶದ ಒಳಗೆ ಮನೋಮಯ ಕೋಶವಿರುತ್ತದೆ. ನಮ್ಮ ಸಂಕಲ್ಪ-ವಿಕಲ್ಪಾತ್ಮಕತೆ ಮತ್ತು ಸುಖ-ದುಃಖ ಮುಂತಾದ ಅಂತಃಕರಣ ವೃತ್ತಿಗಳು ಮನೋಮಯ ಕೋಶವನ್ನು ಸರಿಸುವುದರಿಂದ ಅಲ್ಲಿ ಆನಂದದ ಪ್ರತೀತಿಯಾಗಲು ಆರಂಭಿಸುತ್ತದೆ. ಆದರೆ ಈ ಆನಂದವೂ ಕೂಡ ಆತ್ಮದ ಸ್ವರೂಪಾನಂದವಲ್ಲ. ಇದೂ ಒಂದು ಕೋಶವಾಗಿದ್ದು ಅದಕ್ಕೆ ಆನಂದಮಯ ಕೋಶ ಎಂದು ಕರೆಯುತ್ತಾರೆ. ಈ ಎಲ್ಲಾ ಕೋಶಗಳ ಒಳಗೆ ಆತ್ಮ ಇರುತ್ತದೆ. ಅದು ಕೇವಲ ಸಾಕ್ಷಿರೂಪವಾಗಿರುತ್ತದೆ. ಆನಂದವು ಅದರ ಸ್ವರೂಪವಾಗಿರುತ್ತದೆ.

ಮೇಲಿನ ವಿವರಣೆಯಿಂದ ಆತ್ಮಕ್ಕೆ ಜೀವಾತ್ಮವು ಹೇಗೆ ಪ್ರಾಪ್ತವಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಸ್ಫಟಿಕದ ಪಕ್ಕದಲ್ಲಿ

ಕೆಂಡಸಂಪಿಗೆಯನ್ನು ಇಟ್ಟರೆ ಸ್ಫಟಿಕದ ಬಣ್ಣವು ಅದು ಕೆಂಪಾಗಿ ಇಲ್ಲದಿದ್ದರೂ ಕೆಂಪಾಗಿ ಕಾಣುವಂತೆ ಪಂಚಕೋಶಗಳ 'ಉಪಾಧಿ'ಯಾಗಿ ಆತ್ಮಕ್ಕೆ ಜೀವತ್ವವು ಪ್ರಾಪ್ತವಾಗುತ್ತದೆ. ಅದ್ವೈತವಾದಿಗಳು ಆತ್ಮವನ್ನು ಜೀವತ್ವದಿಂದ ಮುಕ್ತಗೊಳಿಸಲು ನಾಲ್ಕು ಸಾಧನಗಳನ್ನು ಸೂಚಿಸುತ್ತಾರೆ.

೧. **ನಿತ್ಯಾನಿತ್ಯವಸ್ತುವಿವೇಕ :** ಕೇವಲ ಆತ್ಮ ಮಾತ್ರ ನಿತ್ಯವಾಗಿದೆ. ಉಳಿದವುಗಳೆಲ್ಲ ಅನಿತ್ಯ– ಈ ಮಾತನ್ನು ಮನಸ್ಸಿನಲ್ಲಿ ಬಲವಾಗಿ ನಂಬಿಕೊಳ್ಳಬೇಕು.

೨. **ಇಹಾಮುತ್ರಾರ್ಥಫಲಭೋಗವಿರಾಗ :** ಈ ಲೋಕದಲ್ಲಿಯೇ ಆಗಲೀ ಅಥವಾ ಇನ್ನಾವ ಲೋಕದಲ್ಲಿಯೇ ಆಗಲೀ ಏನೇನು ಸುಖ ವೈಭೋಗಗಳು ಲಭ್ಯವಾಗುವ ಸಾಧ್ಯತೆಗಳಿವೆಯೋ ಅವು ಎಲ್ಲವುಗಳ ಬಗ್ಗೆ ಮನಸ್ಸಿನಲ್ಲಿ ಸಂಪೂರ್ಣವಾಗಿ ವಿರಕ್ತಿ ಉಂಟಾಗಬೇಕು.

೩. **ಶಮದಮಾದಿಸಾಧನಸಂಪದ್ :** ಶಮ, ದಮ, ಉಪರತಿ, ತಿತಿಕ್ಷಾ, ಸಮಾಧಾನ ಮತ್ತು ಶ್ರದ್ಧಾ– ಈ ಆರು ವಿಷಯಗಳು ಇದರಲ್ಲಿ ಒಳಗೊಳ್ಳುತ್ತವೆ. ಇಂದ್ರಿಯಗಳ ಪ್ರವೃತ್ತಿಗಳ ಕುರಿತಾಗಿ ಮನಸ್ಸನ್ನು ಒಳಗಿನಿಂದ ನಿಗ್ರಹಿಸುವುದು ಶಮ ಎನಿಸುತ್ತದೆ. ಹೊರಗಿನಿಂದ ಇಂದ್ರಿಯಗಳನ್ನು ನಿರೋಧಿಸುವುದು ದಮವಾಗಿದೆ. ಉಪರತಿ ಎಂದರೆ ವೈಧಾನಿಕವಾಗಿ ಸಂನ್ಯಾಸವನ್ನು ಸ್ವೀಕರಿಸುವುದು. ಶೀತ–ಉಷ್ಣದಂಥ ದ್ವಂದ್ವಗಳನ್ನು ಸಮನಾಗಿ ಸಹಿಸಿಕೊಳ್ಳುವುದು ತಿತಿಕ್ಷಾ ಎನಿಸುತ್ತದೆ. ಚಿತ್ತವನ್ನು ಏಕಾಗ್ರಗೊಳಿಸುವುದು ಮತ್ತು ಅದನ್ನು ಸ್ಥಿರವಾಗಿಡುವುದು ಸಮಾಧಾನ ಎನಿಸುತ್ತದೆ. ಶ್ರದ್ಧೆ ಎಂದರೆ ವೇದಾಂತ ಸಿದ್ಧಾಂತಗಳಲ್ಲಿ ಅವಿಚಲವಾದ ನಿಷ್ಠೆಯನ್ನು ಹೊಂದಿರುವುದು.

೪. **ಮುಮುಕ್ಷುತ್ವ :** ಮುಮುಕ್ಷುತ್ವದ ತಾತ್ಪರ್ಯವೆಂದರೆ ಮೋಕ್ಷದ ಬಗ್ಗೆ ಆಳವಾದ ಇಚ್ಛೆಯನ್ನು ಹೊಂದಿರುವುದು.

– *ಮುಂದುವರೆಯುವುದು*

ಒಬ್ಬರ ಮನವ ನೋಯಿಸಿ,
ಒಬ್ಬರ ಮನವ ಘಾತವ ಮಾಡಿ,
ಗಂಗೆಯಮುಳುಗಿದಡೇನಾಗುವುದಯ್ಯಾ ?
ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು ?
ಕಲಂಕ ಬಿಡದಾಯಿತ್ತಯ್ಯಾ.
ಅದು ಕಾರಣ, ಮನವ ನೋಯಿಸದವನೆ,
ಒಬ್ಬರ ಘಾತವ ಮಾಡದವನೆ,
ಪರಮಪಾವನ ನೋಡಾ,
ಕಪಿಲಸಿದಮಲ್ಲಿಕಾರ್ಜುನಾ.

❀ ◯ ❀

ಪಾಪವ ಮಾಡಿ ಮುಳುಗಿದಡೇನು,
ಮುಳುಗಿ ಪಾಪವ ಮಾಡಿದಡೇನು ?
ಗಂಗೆ ಪದವಿಯ ಕೊಟ್ಟಡೆ ಅದು ದುರ್ಗುಣವೆ ಅಯ್ಯಾ.
ಸದ್ಗುಣವಾದಡೂ ಆಗಲಿ,
ಈ ಮನುಜರು ಮಾಡುವ ಕರ್ಮಕ್ಕೆ
ಆಕೆಯ ಸದ್ಗುಣ ಸಂಧಾನವಾಯಿತ್ತು ನೋಡಾ,
ಕಪಿಲಸಿದಮಲ್ಲಿಕಾರ್ಜುನಾ.

– ಸಿದರಾಮ

ಆಚಾರವಿಡಿದು ಲಿಂಗ, ಅನುಭಾವವಿಡಿದು ಜಂಗಮ,
ತನುವಿನ ಪ್ರಾಣ ಆಚಾರ, ಮನದ ಪ್ರಾಣ ಅನುಭಾವ.
ಇದು ಕಾರಣ ಕೂಡಲಚೆನ್ನಸಂಗಮದೇವಾ,
ಲಿಂಗವನೂ ಜಂಗಮವನೂ ಬೇರರಸಲಿಲ್ಲ.

❖ ❖ ❖

ಹೊರಗಣ ಭವಿಯ ಕಳೆದೆವೆಂಬರು,
ಒಳಗಣ ಭವಿಯ ಕಳೆಯಲರಿಯರು,
ಕಾಮವೆಂಬುದೊಂದು ಭವಿ,
ಕ್ರೋಧವೆಂಬುದೊಂದು ಭವಿ,
ಲೋಭವೆಂಬುದೊಂದು ಭವಿ,
ಮೋಹವೆಂಬುದೊಂದು ಭವಿ,
ಮದವೆಂಬುದೊಂದು ಭವಿ,
ಮಚ್ಚರವೆಂಬುದೊಂದು ಭವಿ,
ಆಸೆಯೆಂಬುದೊಂದು ಭವಿ,
ಆಮಿಷವೆಂಬುದೊಂದು ಭವಿ,
ಹೊನ್ನೆಂಬುದೊಂದು ಭವಿ, ಹೆಣ್ಣೆಂಬುದೊಂದು ಭವಿ,
ಮಣ್ಣೆಂಬುದೊಂದು ಭವಿ.
ಇಂತೀ ಭವಿಯ ಕಳೆದುಳಿದ ಕೂಡಲಚೆನ್ನಸಂಗಾ ನಿಮ್ಮ ಶರಣ.

– ಜ್ಞಾನಯೋಗಿ ಚನ್ನಬಸವಣ್ಣ





# ಮಹಾತ್ಮರಂ ನೆನೆವುದೇ ಘನಮುಕ್ತಿ

(ಮುಂದುವರಿದ ಭಾಗ)

– **ಹೆಚ್. ಗಂಗಾಧರನ್** *

ಬಾಲಕರಾಗಿದ್ದರೂ ಸಾರಾಸಾರ ವಿಚಾರಪರರೆನಿಸಿದ್ದ ಗೌರೀಶಂಕರರು ಇತ್ತೀಚಿನ ದಿನಗಳಲ್ಲಿ ತಾವು ಬಾಲಕರಾಗಿದ್ದಾಗಲೇ ಯಾವ ಆಸ್ತಿಪಾಸ್ತಿಯಿಲ್ಲದ ಈ ಮಠಕ್ಕೆ ಉತ್ತರಾಧಿಕಾರಿಗಳಾದುದೇಕೆಂಬುದರ ಬಗೆಗೆ ನಗುತ್ತ ಹೇಳುತ್ತಿದ್ದುದು ಹೀಗೆ: 'ನನಗೆ ಬಾಲ್ಯದಿಂದಲೂ ಐಶ್ವರ್ಯದ ಬೆಟ್ಟವಾಗಿ ಕಾಣುತ್ತಿದ್ದು ಕರ್ನಾಟಕ, ಸಂಸ್ಕೃತ–ಆಂಗ್ಲಭಾಷಾಭ್ಯಾಸದ ಹಂಬಲು.' ಸಂಸ್ಕೃತ ಭಾಷೆಯಲ್ಲಿ ಮಡುಗಟ್ಟಿ ನಿಂತ ದರ್ಶನ ಜ್ಞಾನಸಮುದ್ರವನ್ನು, ಸಾಹಿತ್ಯ ಸಾಗರವನ್ನು ಅಗಸ್ತ್ಯನಂತೆ ಕುಡಿದುಬಿಡಬೇಕೆಂಬ ಪ್ರಬಲಾಗುರ ಒಂದೆಡೆ; ಬಸವಾದಿ ಪ್ರಮಥರ ವಚನಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವ ಶಿವಾನುಭವ ಸಮುದ್ರದಲ್ಲಿ ಮನದಣೀ ಈಸಾಡಬೇಕೆಂಬ ಅತಿ ಉತ್ಕಟೇಚ್ಛೆ ಮತ್ತೊಂದೆಡೆ; ವಿವಿಧ ಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವ ಶಿವಾನುಭವ ಸಮುದ್ರದಲ್ಲಿ ಮನದಣೀ ಈಸಾಡಬೇಕೆಂಬ ಅತಿ ಉತ್ಕಟೇಚ್ಛೆ ಮತ್ತೊಂದೆಡೆ; ವಿವಿಧ ಶಾಸ್ತ್ರಗಳನ್ನು ತಪಸ್ಪರ್ಶಿಯಾಗಿ ಓದಬೇಕೆಂಬ ಆಸೆ ಇನ್ನೊಂದೆಡೆ. ಈ ಎಲ್ಲ ಭಾವನೆಗಳು ಸದಾ ನನ್ನನ್ನು ಕಾಡುತ್ತಿದ್ದವು. ನನ್ನ ಜೀವನ ಹೇಗೆ ಮುಂದುವರಿಯಬೇಕೆಂಬ ಬಗೆಗೆ ಆ ಬಾಲ್ಯದಲ್ಲಿಯೇ ನನಗೆ ದಾರಿ ತೋರಿದವು. ಶಿವಶರಣ ಕಾಲಭೂಮಿಯಲ್ಲಿ ವಿರಕ್ತಿಯಿಂದ ಬೇರೂರಿ ಬೆಳೆದು ಶಿವಾನುಭವದಲ್ಲಿ ಮಡಲ್ತು ನಿಜಾನುಭೂತಿಯಿಂದ ಹೂಬಿಟ್ಟು ಪರಿಪೂರ್ಣ ರಸಪರಿಣತಿಯಿಂದ ಹಣ್ಣಾಗಿ ಪರತತ್ವವೇ ಒಡಲುವಿಡಿದಂತೆ ಆಗಬೇಕೆಂಬುದೇ ಆಗಿನ ನನ್ನ ಮಹತ್ವಾಕಾಂಕ್ಷೆ. ಈ ಸ್ಥಿತಿಗೇರಲು ನಾನು ಆಗ ಯಾವ ಬೆಲೆಯನ್ನಾದರೂ ತೆತ್ತಬಲ್ಲವನಾಗಿದ್ದೆ; ಯಾವ ಶ್ರಮ ಜೀವನಕ್ಕೂ ಸಿದ್ಧನಾಗಿದ್ದೆ. ಅರಮನೆಯ ಪಂಚಗವಿಮಠದ ನಿರ್ಭೀತ ವಾತಾವರಣ. ವಿಕಾರ ಕಾರಣಗಳಾದ ಐಶ್ವರ್ಯದ ಅಭಾವ. ತಪೋಯೋಗ್ಯವೆನಿಸಿದ ಗುಹಾವಿಶಿಷ್ಟ ನೆಲೆ, ನಗರ ಜಂಜಡಜೀವನದಿಂದ ಬಹುದೂರ ಬೆಟ್ಟದಲ್ಲಿ ಏಕಾಂಗಿಯಾಗಿ ನಿಂತ ಆ ಮಠದ ತಾಣ ಆಗ ನನಗೆ ಹಿಡಿಸಿದಂತೆ ಯಾವುದೂ ಹಿಡಿಸಿರಲಿಲ್ಲ. ಈ ವಿಷಯವನ್ನು ನನ್ನ ಹಿತೈಷಿಗಳೇ ಆಗಿದ್ದ ಆಗಿನ ಸಮಾಜದ ಗಣ್ಯರು ಮಹಾರಾಜರು ನನಗೆ ತಿಳಿಸಿದ ಮೇಲೆ ನಾನು ಅಂತು ಇಂತು ಅನ್ನುವುದಾದರೂ ಏನು? ಅವರೆಲ್ಲ ನನ್ನ ಉತ್ಕರ್ಷ ಕಾಮನಾ ಮಾನಸರೇ ಅಲ್ಲವೆ. ಆದ್ದರಿಂದ ಗವಿಮಠಾಧಿಪತ್ಯಕ್ಕೆ ಹಿಂದೆ ಮುಂದೆ ನೋಡದೆ ಒಪ್ಪಿಕೊಂಡುಬಿಟ್ಟೆ. ಸ್ಥಾನವಿಶೇಷ ಬಲದಿಂದ ನನ್ನ ಮನಸ್ಸಿನಲ್ಲಿ ಅಗಾಧ ಸಂಕಲ್ಪಬಲ ದಿನೇ ದಿನೇ ಸಂಚಯನಗೊಳ್ಳ ತೊಡಗಿತು. 'ಭಾವನಾತ್ಮಕ ವಾಗಿ ನಾನೀಗ ಬಹಳಷ್ಟು ಶ್ರೀಮಂತನಾಗಿಬಿಟ್ಟಿದ್ದೇನೆಂಬ ನೆನಪು ನಿಂತ ನೆಲದಗುಣ ಬಂದ ಕಾಲದ ಗುಣ' ಎಂದು ರಾಘವಾಂಕ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಬೇರೆ ಸನ್ನಿವೇಶದಲ್ಲಿ ಹೇಳುವುದುಂಟು. ಈ ಮಾತನ್ನು ಒಳ್ಳೆಯದಕ್ಕೂ ಅನ್ವಯಿಸಿಕೊಳ್ಳಬಹುದು. ಮಹಾ ಮಹಾಶಿವಯೋಗಿಗಳ ತತ್ತ್ವನಿಷ್ಠರ ಶಾಸ್ತ್ರಜ್ಞಾನ ಶ್ರೀಮಂತರ ಈ ಕಾಣದ ಗುಣ ನನ್ನ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿತು. ವಿದ್ಯಾಭ್ಯಾಸದ ಗರಿಷ್ಠ ಮಹತ್ವಾಕಾಂಕ್ಷೆಯ ಕಾಲಕ್ಕೆ ಈ ಮಠಾಧಿಪತ್ಯ ನನ್ನನ್ನೇ ಹುಡುಕಿಕೊಂಡು ಬಂದುದೊಂದು ಕಾಲಗುಣವಲ್ಲದೆ ಮತ್ತೇನು' ಇತ್ಯಾದಿ ತಮ್ಮ ಹನ್ನೆರಡನೇ ವರ್ಷದ ಹಿಂದಿನ ಜೀವನ ದಾಳಕ್ಕಿಳಿದು ನೆನಸಿಕೊಂಡು ನಗುನಗುತ್ತ ಹೇಳುತ್ತಿದ್ದು ದುಂಟು; ಐವತ್ತೊಂದು ಐವತ್ತೆರಡನೆಯ ವಯಸ್ಸಿನಲ್ಲಿ.

### *ಪ್ರೌಢ ವಿದ್ಯಾವ್ಯಾಸಂಗ*

ಅರಮನೆ ಪಂಚಗವಿಮಠಾಧ್ಯಕ್ಷರಾಗಿ ಜಂಗಮ ಲಾಂಛನವನ್ನುಟ್ಟು ತಮ್ಮ ಹೆಬ್ಬಯಕೆಯಾದ ವಿದ್ಯಾವ್ಯಾಸಂಗವನ್ನು ಗೌರೀಶಂಕರರು ಮುಂದುವರೆಸಿದರು. ಕೇವಲ ಅರಮನೆಯಿಂದ ಬರುವ ಸಮೃದ್ಧ ಪಡಿಪದಾರ್ಥ ಪ್ರಸಾದ ರೋಗಣೆಯಲ್ಲಿ ಭಕ್ತಾದಿಗಳ ಬಿನ್ನಹಾದಿಗಳಿಗೆ ದಯ ಮಾಡಿಸಿ ವಿವಿಧ ಭಕ್ಷ್ಯಭೋಜ್ಯಗಳಲ್ಲಿ ತೃಪ್ತರಾಗುತ್ತ ಮತ್ತರಾಗಿ ಕುಳಿತುಕೊಳ್ಳಲಿಲ್ಲ. ವಿವಿಧ ವಿದ್ಯಾಮಹಿತರ ನಿರಾಕುಳ ಸಂಗಕ್ಕೆಳಸುತ್ತ ಶಿವಯೋಗ ಸಾಧನೆಯ ಪ್ರಬಲಾ ಕುರಕ್ಕೊಳಪಡುತ್ತ ಕ್ರಿಯಾಶೀಲರಾಗತೊಡಗಿದರು. ವೈರಾಗ್ಯ ಭಾವ ದಿನೇ ದಿನೇ ಬಲಿಯತೊಡಗಿತು. ಅಷ್ಟು ಇಷ್ಟು ಸಂಸ್ಕೃತ, ಕನ್ನಡ, ಆಂಗ್ಲ ವಿದ್ಯಾವ್ಯಾಸಂಗ ಪ್ರತಿಭಾನಿವಿತವಾಗಿ ಮುಂದುವರಿಯುತ್ತಲೇ ಇತ್ತು. ತಾನುಂಟೋ ತನ್ನ ಸಾಧನೆಯುಂಟೋ ಎಂಬ ಅವರ ವಿದ್ಯಾರ್ಜನೆಯಲ್ಲಿನ ಕಾತರಗಳು ಭಕ್ತರಿಗೆ ನಿರಾಸೆಯನ್ನೇ ಉಂಟು ಮಾಡುತ್ತಿದ್ದವು. ಈಗ ಕಲಿತುದೇ ಸಾಕು,

* ಹಿರಿಯ ನ್ಯಾಯವಾದಿಗಳು, ಮೈಸೂರು.

ಅವರು ಮನೆಗೆ ಭಕ್ತರ ಭಿನ್ನಹವನ್ನು ಒಪ್ಪಿ ದಯಮಾಡಿಸಿ, ಅವರಿಗೆ ತೀರ್ಥ ಪ್ರಸಾದ ಪ್ರದಾನ ಮಾಡಿದರೆ ಸಾಕೆನ್ನುವುದು ಅವರ ಅಭಿಪ್ರಾಯವಾಗಿತ್ತು. ಆದರೆ ಇದಿಷ್ಟರಲ್ಲಿಯೇ ತಮ್ಮ ಜೀವಿತವನ್ನು ಸವೆಸುವುದು ಶ್ರೀಗಳವರಿಗೆ ಒಗ್ಗದ ವಿಷಯ ವಾಗಿತ್ತು. ಅವರು ಪ್ರತಿಭಾವಿಶಿಷ್ಟರಾಗಿ ಬೆಳೆಯುತ್ತಿರುವುದೂ ಕೆಲವರ ಸಹನೆಯನ್ನು ಕೆಡಿಸುವಂತಾಗಿತ್ತು. ಇಂಥ ಸಂದಿಗ್ಧ ಪರಿಸರದಲ್ಲಿ ಶ್ರೀಗಳು ಕೊನೆಗೊಮ್ಮೆ ಕಾಶಿಗೆ ಹೋಗಿ ವಿದ್ಯಾಭ್ಯಾಸವನ್ನು ಮುಂದುವರೆಸುವ ತಮ್ಮ ಹಿರಿಯಾಸೆ ಯನ್ನು ಮೈಸೂರಿನ ಭಕ್ತ ಮುಂದಿಟ್ಟರು. ಆದರೆ ಅದಕ್ಕೆ ಕಾಲ ಪಕ್ವವಾಗಿರಲಿಲ್ಲ. ಅವರನ್ನು ಕಾಶಿಗೆ ದೀರ್ಘಕಾಲ ವಿದ್ಯಾವ್ಯಾಸಂಗಕ್ಕೆ ಕಳುಹಿಸಿ ಖರ್ಚುವೆಚ್ಚಗಳನ್ನು ನಿಭಾಯಿಸು ವವರಾರು? ಎಂಬ ಪ್ರಶ್ನೆ ಮುಂದೆ ಬಂದಾಗ ಗೌರೀಶಂಕರರು ಕಸಿವಿಸಿಗೆ ಒಳಗಾಗಿ ಮುಂದೇನು? ಎಂಬ ಚಿಂತೆಗೊಳಗಾಗು ತ್ತಿದ್ದರು. ತಮ್ಮ ಮಠದ ಗವಿ ಯನ್ನು ಪ್ರವೇಶಿಸಿ ಧ್ಯಾನಮಗ್ನ ರಾಗಿ ದಿನವಿಡೀ ಕುಳಿತು ಬಿಡುತ್ತಿದ್ದರು. ಅನ್ನಪಾನಗಳ ಪರಿವೇಯಿಲ್ಲದಾಯಿತು. ದಿನೇ ದಿನೇ ಅವರ ಮುಖದ ಮೇಲಿನ ಮಂದಹಾಸ ಮಾಯವಾಗಿ ಚಿಂತೆಯ ಗೆರೆಗಳೇಳ ತೊಡಗಿದವು. ಅತ್ಯಂತ ಮಮತೆಯಿಂದ ತಮ್ಮ ಪ್ರಸಿದ್ಧವಾದ ಒಂದು ಮಹಾಮಠಕ್ಕೆ ಶ್ರೀಗಳವರನ್ನಾಗಿಸಿಕೊಂಡು ಅವರು ಹೀಗೆ ಸಂಕಟಕ್ಕೊಳಗಾಗಿ ಕಸಿವಿಸಿಗೊಳ್ಳುತ್ತಿರುವುದನ್ನು ನೋಡಿಕೊಂಡು ತೆಪ್ಪಗಿರುವುದು ಭಕ್ತರಿಗೂ ಬೇಕಾಗಿರಲಿಲ್ಲ. ಎಲ್ಲರೂ ಶ್ರೀಗಳವರ ಮನದಿಚ್ಛೆಯಂತೆ ವಿದ್ಯಾಭ್ಯಾಸಕ್ಕೆ ಕಾಶಿಗೆ ಕಳುಹಿಸುವುದೇ ಸೂಕ್ತವೆಂದು ತೀರ್ಮಾನಿಸಿದರು. ಮೈಸೂರಿನ ಆಗಿನ ಗಣ್ಯಮಠವಾಗಿದ್ದ 'ಶ್ರೀನಮಃ ಶಿವಾಯ' ಮಠದ ಶ್ರೀಗಳು ತತ್ಕಾಲೋಚಿತ ಧನ ಸಹಾಯ ಮಾಡಲು ಮುಂದೆ ಬಂದರು. ಆಗಿನ ಮೈಸೂರಿನ ತರುಣ ಮುಖಂಡರೆನಿಸಿದ್ದ ಶ್ರೀ ಪರಮಶಿವಯ್ಯನವರು ಶಾಂತವೀರಪ್ಪ ನವರು ನಿಟ್ಟರೆ ಬಸಪ್ಪನವರೇ ಮೊದಲಾದವರು ಅಲ್ಪಸ್ವಲ್ಪ ಧನ ಸಹಾಯವನ್ನೂ ಮಾಡಿದರು. ಈ ವಿಚಾರ ಶ್ರೀ ಮನ್ಮಹಾರಾಜ ಕೃಷ್ಣರಾಜೇಂದ್ರ ಒಡೆಯರವರ ಗಮನಕ್ಕೆ ಬಂದೊಡನೆ ಅವರು ಶ್ರೀಗಳವರಿಗೆ ಮಾಸಿಕವಾಗಿ ವಿದ್ಯಾರ್ಥಿ ವೇತನ ಕೊಡಲೊಪ್ಪಿ ದರು. ಈ ಕಾರಣವಾಗಿ ಶ್ರೀಗಳವರು ಕಾಶಿ ಕ್ಷೇತ್ರಕ್ಕೆ ವಿದ್ಯಾ ವ್ಯಾಸಂಗಕ್ಕಾಗಿ ದಯಮಾಡಿಸಿಬಿಟ್ಟರು. ಶ್ರೀಗಳವರು ಕಾಶಿಗೆ ತೆರಳಿದ ಮೇಲೆ ಶ್ರೀಮಠವನ್ನು ಅರಮನೆ ಯಿಂದಲೇ ನೋಡಿಕೊಳ್ಳತೊಡಗಿದರು. ೧೯೪೭ರವರೆಗೆ ಆ ಮಠ ಗುರುವಿಲ್ಲದ ಮಠವಾಗಿಯೇ ಉಳಿಯಿತು. ಕಾಶಿಗೆ ಶ್ರೀಗಳವರು ದಯಮಾಡಿಸಿದಾಗ ಅವರಿಗೆ ಕೇವಲ ೧೮ ವರ್ಷಗಳ ಹರಯ.

*– ಮುಂದುವರೆಯುತ್ತದೆ.*

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳ ಬೇಕೆಂದು ಕೋರುತ್ತೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ವರ್ಷದಿಂದ ೧೫೦೦/- ರೂ. ಎಂದು ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ. ಸಂದಾಯ ಮಾಡಿರು ವವರು ಬಾಕಿ ೧೦೦೦/- ರೂ. ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು /ಚೆಕ್ /ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ನಂಬರ್ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.**

'ಸಿದ್ಧಗಂಗಾ' ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು,** 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





# ಗಾಂಧೀ (ಗೋವಿನ) ಮಾರ್ಗದಲ್ಲಿ ವ್ಯಾಘ್ರಗಳು

**– ಎಲ್. ನರಸಿಂಹಯ್ಯ ತೊಂಡೋಟಿ**

ಗಾಂಧೀಜಿ ಪ್ರತಿಪಾದಿಸಿದ ಕಾರ್ಯಕ್ರಮಗಳು ಕಾರ್ಯಗತವಾಗಲೇಬೇಕೆಂದು ಒತ್ತಾಯಿಸುವ ಪಂಥ-ಪಂಗಡ ಸಂಘಟನೆಗಳು ಹುಟ್ಟಿಕೊಳ್ಳಲಿಲ್ಲ. ಅವರ ಕಾರ್ಯಕ್ರಮಗಳ ರೀತಿ-ನೀತಿಗಳನ್ನು ಮನವರಿಕೆ ಮಾಡಿ ಕೊಂಡಿದ್ದವರು ಅಧಿಕಾರದಿಂದ ದೂರವುಳಿದರು.

ಅಕ್ಟೋಬರ್ ೨ ಬಂದಿದೆ. ಗಾಂಧೀಜಿಯವರ ಹುಟ್ಟನ್ನು, ಅವರ ಸಾಧನೆ ವೇದನೆಗಳನ್ನು ಪ್ರಾಸಂಗಿಕವಾಗಿ ಒಂದಿಷ್ಟು ನೆನಪಿಸಲು ಬಂದಿದೆ, ನೆನಪಿಗೆ ತಂದುಕೊಳ್ಳುವು ದಾದರೆ ಅಪ್ಪಟ ದೇಶೀಯ ಪ್ರದಾನಿ ಶಾಸ್ತ್ರಿಯವರದ್ದೂ ಆಗಬಹುದು. ಈ ನೆನಪು, ಕೆಲವು ಮಂದಿಗೆ ಈವೊತ್ತಿಗೂ ಹೃದಯಕ್ಕೆ ತಟ್ಟಬಹುದು. ಇನ್ನು ಕೆಲವು ಮಂದಿಗೆ ಬುದ್ಧಿಗೆ ಮುಟ್ಟಬಹುದು. ಆದರೆ ಬಹಳ ಮಂದಿಗಂತೂ ಏನೂ ಅಲ್ಲದ ಅಲ್ಲದ ಯಾಂತ್ರಿಕ ಕ್ರಿಯೆಯೇ ಆಗಿರುತ್ತದೆ. ಈ ಯಾಂತ್ರಿಕತೆ ತಪ್ಪಿ(ಸಿ)ದರೆ ಗಾಂಧೀಜಿಗೂ ಗೌರವ, ಇವರಿಗೂ ನೆಮ್ಮದಿ, ಆಯಸ್ಸು ತೀರುವ ಮುನ್ನವೇ, ಗಾಂಧೀಜಿಯವರನ್ನು ಕಳೆದುಕೊಂಡದ್ದಾಯಿತು. ಆದರೆ, ಅವರು ಪ್ರತಿಪಾದಿಸಿದ ಮೌಲ್ಯ-ಮಾರ್ಗಗಳೂ ಕಾಣೆ ಯಾಗುತ್ತಿವೆ ಎಂಬುದು ಮಾತ್ರ ನೋವಿನ ಸಂಗತಿ.

ದೇಶದ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಸುಮಾರು ೯ ದಶಕಗಳ ಕಾಲ ಮೂರು ಮಜಲುಗಳಲ್ಲಿ ನಡೆದ ಹೋರಾಟದ ಕೊನೆಯ ೩೨ ವರ್ಷಾವಧಿಯ (೧೯೧೫ ರಿಂದ ೧೯೪೭) ನಿರ್ವಹಣೆಯನ್ನು ಹೊತ್ತು ಅಹಿಂಸೆಯ ಹಾದಿಯಲ್ಲಿ ಹೋರಾಟವನ್ನು ಮುನ್ನಡೆಸಿ ಗುರಿ ಸಾಧಿಸಿದವರು ಗಾಂಧೀಜಿ ಎಂಬುದೂ ಜಾರಿ ಹೋಗುತ್ತಿರುವ ಇತಿಹಾಸ. ಆ ಅಹಿಂಸಾ ಪ್ರವಾದಿ, ಕೇವಲ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಮಾತ್ರ ಹೋರಾಡಿದವರಲ್ಲ ಸ್ವಾತಂತ್ರ್ಯಾ ನಂತರದಲ್ಲಿ ತನ್ನ ರಾಷ್ಟ್ರ ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಆರ್ಥಿಕ ಹಾಗೆಯೇ ರಾಜಕೀಯವಾಗಿ ಹೇಗೆ ರೂಪುಗೊಳ್ಳಬೇಕು ಎಂಬ ಪರಿಕಲ್ಪನೆಯಿಂದ ೧೮ ರಚನಾತ್ಮಕ ಕಾರ್ಯಗಳನ್ನು ರೂಪಿಸಿಕೊಂಡಿದ್ದರು. ಆದ್ದರಿಂದಲೇ, ಬೇರೆ ಹೋರಾಟ ಗಾರರಿಗಿಂತ, ಬೇರೆ ರಾಜಕಾರಣಿಗಳಿಗಿಂತ ವಿಶಿಷ್ಟವಾಗಿ ಗಾಂಧೀಜಿಯವರು ಕಂಡು ಬರುತ್ತಾರೆಂಬುದು ಗಮನಾರ್ಹ.

### *ರಾಜಕೀಯ ವ್ಯಾಘ್ರ*

ಸ್ವತಂತ್ರ ಭಾರತದಲ್ಲಿ ಎಲ್ಲವೂ ಆಡಳಿತ, ಅಭಿವೃದ್ಧಿ ಮತ್ತು ವಿಚಾರಗಳೆಲ್ಲವೂ ರಾಜಕೀಯ ಮಯವೇ, ಒಬ್ಬ ಹೊರಗಿನವ ಹೇಳುವಂತೆ ಇನ್‌ಕ್ವೆಸ್ಟೆಡ್ ಇಂಟ್ರೆಸ್ಟ್ ಇನ್ ಪೊಲಿಟಿಕ್ಸ್ ಇನ್ ದಿ ಕಾಮನ್ ಫ್ಯೂಚರ್ ಇನ್ ಇಂಡಿಯಾ ಇತ್ತೀಚಿನ ದಶಕಗಳಲ್ಲಿ, ಚುನಾವಣೆಗಳಲ್ಲಿ ಗೆಲ್ಲುವುದನ್ನೇ ಗುರಿಯಾಗಿಸಿಕೊಳ್ಳುವ 'ಸಮರ್ಥ' ರಾಜ ಕಾರಣಿಗಳನ್ನು 'ಶಿಷ್ಟರನ್ನು' ಖಂಡಿತ ಅಲ್ಲ. ನಿಲ್ಲಿಸುವ ಜಾಡ್ಯ ಎಲ್ಲ ಪಕ್ಷಗಳಿಗೂ ಅಂಟಿಕೊಂಡಿದೆ. ಆದ್ದರಿಂದ, ಗಾಂಧೀಜಿ ಪ್ರತಿಪಾದಿಸಿರುವ 'ತತ್ವ ನಿಷ್ಠರಾಜಕೀಯ' ಎಂಬುದು ಈ ಮೇಲಾಟದ ರಾಜಕೀಯ ಘಡವಗಳಿಗೆ ತಿಳಿಸಿರುವುದಿಲ್ಲ. ಅವರಿಗೆ ಬೇಕಾಗಿಯೂ ಇಲ್ಲ. ಗೆದ್ದು ಬರುವ ವ್ಯಾಘ್ರರು. ಅಗ್ಗದ ಹಾಗೂ ಪ್ರತಿಷ್ಠೆಯ ರೀತಿ ನೀತಿಗಳಿಂದ ವಿಜೃಂಭಿಸುತ್ತ ಜನಮಾನಸದಲ್ಲಿ ನೆಲೆಯಾಗುತ್ತಿರುವ ಘೋರದುರಂತವೇ ಆಗಿದೆ. ಶಿಷ್ಟ ರಾಜ ಕಾರಣ, ದಕ್ಷ ಆಡಳಿತ ಮುಖ್ಯವಾಗಿ ಅಗತ್ಯಾಧಾರಿತ ಗುಣಾತ್ಮಕ ಅಭಿವೃದ್ಧಿ ಕಾರ್ಯಗಳು ನಿಕಟ ಭವಿಷ್ಯದಲ್ಲಿ ಸಾಧ್ಯವೇ ಇಲ್ಲ ಎಂಬ ದಟ್ಟ ವಾತಾವರಣ ಕಂಡು ಬರುತ್ತಿದೆ.

### *ಕೋಮು ವ್ಯಾಘ್ರ*

ರಾಜಕೀಯದಲ್ಲಿ ಸಂತರಾಗಿದ್ದ ಗಾಂಧೀಜಿ ನಮ್ಮ ಸಮಾಜವನ್ನು ಚೆನ್ನಾಗಿ ತಿಳಿದುಕೊಂಡಿದ್ದರು. (ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಿರುವ ಈ ದೇಶದ ಹಣೆಯ ಬರಹ ಸಮಾಜಾಧಾರಿತವೆಂಬುದನ್ನು ೧೯೧೦ರಷ್ಟು ಹಿಂದೆಯೇ ಕಂಡುಕೊಂಡಿದ್ದರು) ಶಿಷ್ಟ ಸಮಾಜದ ನಿರ್ಮಾಣಕ್ಕೆ ಕೋಮುಗಳ ಸೌಹಾರ್ದತೆಯನ್ನು ಬಲವಾಗಿ ಪ್ರತಿಪಾದಿಸಿ ದವರು ಮಾತ್ರವಲ್ಲ, ರಚನಾತ್ಮಕ ಕಾರ್ಯಗಳಲ್ಲಿ ಇದನ್ನು

ಒಂದಾಗಿಸಿ ಕಾಂಗ್ರೆಸ್ ಕಾರ್ಯಕರ್ತರೂ ಶ್ರಮಿಸುವಂತೆ ಕರೆ ನೀಡಿದರು. ಸ್ವಾತಂತ್ರ್ಯಾನಂತರದಲ್ಲಿ ಅಧಿಕಾರಕ್ಕೆ ಬಂದವರು ಇದನ್ನು ಆದ್ಯತಾ ಕ್ರಮದಲ್ಲಿ ಕೈಗೆತ್ತಿಕೊಳ್ಳಲೇ ಬೇಕಾಗಿತ್ತು. (ಈ ಹೀನ ಕೋಮು ಭಾವನೆಯೇ-ರಾಷ್ಟ್ರದ ವಿಭಜನೆಗೆ ಕಾರಣವಾಯಿತು, ರಕ್ತದ ಹೊಳೆಗಳು ರಾಷ್ಟ್ರದ ಪೂರ್ವಪಶ್ಚಿಮ ಭಾಗಗಳಲ್ಲಿ ನದಿಗಳಿಗೆ ಹರಿಯಲೂ ಕಾರಣವಾಯಿತು. ಕೊನೆಗೆ ರಾಷ್ಟ್ರಪಿತನ ಕೊಲೆಗೂ ಕಾರಣ ವಾಯಿತು ಎಂಬುದು ಸ್ಪಷ್ಟವಾಗಿತ್ತು) ದೇಶದಲ್ಲಿರುವ ಎಲ್ಲಾ ಧರ್ಮಾಚಾರ್ಯರನ್ನು ಸಮಾವೇಶಗೊಳಿಸಿ ಶಾಂತಿ ಪಾಲನೆಗೆ ಮತ್ತು ರಾಷ್ಟ್ರೀಯ ಧರ್ಮದ ನಿರೂಪಣೆಗೆ ಸೂಕ್ತ ಕ್ರಮ ಕೈಗೊಳ್ಳಬೇಕಾಗಿತ್ತು. ಮಾಡದಿರುವ ಕಾರಣ, ಈ ಕೋಮು ವ್ಯಾಘ್ರ ಇಂದಿಗೂ, ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳು ನಡೆಯುವ ಸಂದರ್ಭಗಳಲ್ಲಿ ತನ್ನ ಕ್ರೌರ್ಯವನ್ನು ಮೆರೆಯುತ್ತಿದೆ ಎಂಬುದು ನಿಜ. ಆಯಾ ಕೋಮಿನ ನಿಯಂತ್ರಕ ಸ್ಥಾನದಲ್ಲಿರುವ ಆಯಾ ಧರ್ಮಾಚಾರ್ಯರು, ತಪ್ಪು ಮಾಡಿದವರನ್ನು ದಂಡಿಸುವುದಾಗಲೀ, ತಪ್ಪನ್ನು ಖಂಡಿಸುವುದಾಗಲಿ ಮಾಡುತ್ತಿಲ್ಲವೆಂಬುದು ವಿಷಾದದ ಸಂಗತಿ ಹಾಗೆಯೇ ಆತಂಕವೂ ಹೌದು!

***ಅಸ್ಪೃಶ್ಯತೆಯ ವ್ಯಾಘ್ರ***

ಹಿಂದೂ ಧಾರ್ಮಿಕ ವ್ಯವಸ್ಥೆಯ ಘೋರಕಳಂಕ, ಸಮಾಜದ ಕೊಳಲು ಮಂಡಲವೆನಿಸಿದ್ದ ಅಸ್ಪೃಶ್ಯತೆಯ ಕಷ್ಟಸಂಕಷ್ಟಗಳನ್ನು ಅರ್ಥ ಮಾಡಿಕೊಂಡಿದ್ದ ಗಾಂಧೀಜಿ, ನಿವಾರಣೆಗಾಗಿ ಸಾಧ್ಯವೆನಿಸಿದ ಎಲ್ಲಾ ಕ್ರಮಗಳನ್ನೂ ಕೈಗೆತ್ತಿ ಕೊಂಡರು. (ಇವರಿಗಿಂತ ಮುಂಚಿನ ದಿನಗಳಲ್ಲಿ ದೇಶದ ಬೇರೆ ಬೇರೆ ಭಾಗಗಳಲ್ಲಿ ಶ್ರಮಿಸಿದವರೂ ಇದ್ದರು ಅವರೆಲ್ಲರ ಪ್ರಯತ್ನಗಳೂ ಬಹಳ ಮಟ್ಟಿಗೆ ಸ್ಥಾನೀಯವಾಗಿದ್ದವು) ಆಶ್ರಮಗಳಲ್ಲಿ ಪ್ರವೇಶ ನೀಡಿದರು ಒಂದು ಹೆಣ್ಣು ಮಗುವನ್ನು ದತ್ತು ತೆಗೆದುಕೊಂಡು ಮನೆಯಲ್ಲಿರಿಸಿ ಕೊಂಡರು. ಸಿದ್ಧಮನಸ್ಕರಾಗಿಲ್ಲದಿದ್ದ ಕಸ್ತೂರ್‌ಬಾ ಅವರನ್ನೂ ಪಳಗಿಸಿ ಕೊಂಡರು. ಹರಿಜನರಿಗೆ ಪ್ರವೇಶ ನೀಡದಿದ್ದ ದೇವಸ್ಥಾನಗಳಿಗೆ ತಾವು ಹೋಗಬಾರದು, ವಿಜಾತೀಯ ಮದುವೆಗಳನ್ನು ಪ್ರೋತ್ಸಾಹಿಸಿದರು.

***ದುರಭ್ಯಾಸಗಳ ವ್ಯಾಘ್ರ***

ವ್ಯಕ್ತಿಗತವಾದ ಎಲ್ಲವನ್ನೂ, ಸಂಸಾರದ ನೆಮ್ಮದಿಯನ್ನು, ಕರುಳಿನ ಕುಡಿಗಳ ಭವಿಶ್ಯವನ್ನೂ ಹಾಳುಮಾಡುವ ದುರಭ್ಯಾಸ - ದುರ್ವ್ಯಸನಗಳ ದೊರೆಸಾನಿ-ಕುಡಿತ, ಇದು ಕಳ್ಳತನ ಮತ್ತು ವ್ಯಭಿಚಾರಗಳಿಗಿಂತಲೂ ಹೀನವಾದದ್ದು. ಸಮುದಾಯ ವಿಶೇಷವಾಗಿ ಅದರ ಯುವಪೀಳಿಗೆ ಇದರ ಸಹವಾಸಕ್ಕೆ ಬೀಳದಂತೆ ಎಚ್ಚರಿಕೆ ವಹಿಸಿ ಶಿಷ್ಟ-ಸಭ್ಯ ಸಮಾಜ ಅಸ್ತಿತ್ವದಲ್ಲಿರುವಂತೆ ನೋಡಿಕೊಳ್ಳಬೇಕಾದ ಸಾಮಾಜಿಕ ಜವಾಬ್ದಾರಿ ಸರಕಾರದ್ದು ಎಂದಿರುವ ಗಾಂಧೀಜಿ, ತನಗೆ ಒಂದರ್ಧ ಗಂಟೆ ಅಧಿಕಾರ ಸಿಕ್ಕಿದರೆ, ದೇಶವ್ಯಾಪಿ ಇರುವ ಎಲ್ಲ ಮದ್ಯದ ಅಂಗಡಿಗಳನ್ನೂ ಯಾವುದೇ ಪರಿಹಾರ ನೀಡದೆ ಮುಚ್ಚಿಸಿ ಬಿಡುತ್ತೇನೆ ಎನ್ನುತ್ತಿದ್ದರು.

ಮದ್ಯಪಾನ ನಿಷೇಧವನ್ನು ರಚನಾತ್ಮಕ ಕಾರ್ಯಗಳಲ್ಲಿ ಸೇರಿಸಿ ರಾಷ್ಟ್ರೀಯ ಸಮಸ್ಯೆ ಎಂಬುದನ್ನು ಮನವರಿಕೆ ಮಾಡಿದರು.

ಆದರೆ ಸ್ವಾತಂತ್ರ್ಯ ನಂತರದಲ್ಲಿ ಆಗಿದ್ದಾದರೂ ಏನು? ಈ ಮೊದಲು, ಒಂದು ರೀತಿ ಅಪರಾಧೀ ಮನೋಭಾವದ ಅಭ್ಯಾಸ ಮತ್ತು ವ್ಯವಹಾರವೆನಿಸಿದ್ದ ಮದ್ಯಪನ, ಈವೊತ್ತು, ಯಾವುದೇ ಮಜುಗರವಿಲ್ಲದ, ಪ್ರತಿಷ್ಠಿತ ಪ್ರಬಲ ದಂಧೆಯಾಗಿದೆ. ಮಾತ್ರವಲ್ಲ ಆಡಳಿತಾರೂಢರನ್ನೂ ಪಳಗಿಸಿಕೊಳ್ಳುವ ಉದ್ಯಮವಾಗಿದೆ. ಗಾಂಧೀಜಿಯವರ ನಿಲುವು ತತ್ತ್ವಗಳಿಗೆ ಸೆಡ್ಡು ಹೊಡೆದು ಬೆಳೆಯುತ್ತಿದೆ.

'ಕುಡಿತ ಕಾನೂನಿಗೆ ವಿರೋಧ' ಎಂದು ಸಮಾಜದ ಹಿತೈಷಿಗಳು ಪರಿಗಣಿಸಿದ್ದರೆ, ಶ್ರಮಿಕ ವರ್ಗ ನೆಮ್ಮದಿಯಿಂದ ಬಾಳಬಹುದಿತ್ತು. ಶಿಷ್ಟ ಸಮಾಜವನ್ನು ಕಾಣಬಹುದಿತ್ತು, ಸಮುದಾಯದ ಹಿತವನ್ನು ಬಯಸುವ, ಅದಕ್ಕೆಂದೇ ಆಡಳಿತಾರೂಢರಾಗಿರುವ ಮಹೋದರು, ಹೆಸರಿಸಿದ ವ್ಯಾಘ್ರಗಳನ್ನು ನಿಯಂತ್ರಿಸುವ ಮನಸ್ಸು ಮಾಡಿದರೆ, ಗಾಂಧೀ ಗೋವಿಗೂ ಗೌರವ ನೀಡಿದಂತಾಗುತ್ತದೆ.

ಸೌಜನ್ಯ : ಪ್ರಜಾಪ್ರಗತಿ ೨-೧೦-೨೦೧೫

ನಿಮ್ಮ ಕನಸನ್ನು ನನಸು ಮಾಡಬೇಕೆಂದಿದ್ದರೆ ನಿದ್ದೆ ಮಾಡಬೇಡಿ.

- ವಾಲ್ಟ್ ಡಿಸ್ನಿ





## ಭಾರತದ ಅನರ್ಘ್ಯರತ್ನ ಲಾಲ್ ಬಹದ್ದೂರ್ ಶಾಸ್ತ್ರಿ

- ಟಿ. ನರೇಂದ್ರಬಾಬು

ವಿಶ್ವ ಕಂಡ ಅತ್ಯಂತ ಪ್ರಾಮಾಣಿಕ ಸರಳ, ಸೌಮ್ಯ ಸ್ವಭಾವದ ಮೇಲ್ಪಂಕ್ತಿ ರಾಜಕಾರಣಿ, ದೇಶದ ಎರಡನೇ ಪ್ರಧಾನಮಂತ್ರಿಯಾದ ಲಾಲ್ ಬಹದ್ದೂರ್ ಶಾಸ್ತ್ರಿಯವರು ಪ್ರಾತಃಸ್ಮರಣೀಯರು.

ಅಕ್ಟೋಬರ್ ೨, ಈ ದೇಶಕ್ಕೆ ಇಬ್ಬರು ದೇಶಭಕ್ತ ಮಹನೀಯರನ್ನು ಕೊಡುಗೆಯಾಗಿ ಕೊಟ್ಟ ದಿನ. ಒಬ್ಬರು ಸ್ವಾತಂತ್ರ್ಯ ಹೋರಾಟಗಾರರಾದ ಮಹಾತ್ಮಗಾಂಧಿ, ಮತ್ತೊರ್ವರು ಉತ್ತಮ ರಾಜನೀತಿಜ್ಞ ಭಾರತರತ್ನ ಲಾಲ್ ಬಹದ್ದೂರ್ ಶಾಸ್ತ್ರಿ. ಇವರು ೧೯೦೪ರ ಅಕ್ಟೋಬರ್ ೨ರಂದು ಉತ್ತರ ಪ್ರದೇಶದ ಕಾಶಿ ಬಳಿ ಇರುವ ಮೊಗಲ್ ಸರಾಯ್ ಎಂಬ ಊರಿನಲ್ಲಿ ಶಾರದಾಪ್ರಸಾದ್ ಶ್ರೀವಾಸ್ತವ್ ಮತ್ತು ರಾಮದುಲಾರಿದೇವಿ ಎಂಬ ಸಾತ್ವಿಕ ದಂಪತಿಗಳ ಮಗನಾಗಿ ಜನಿಸಿದರು. ತಂದೆ ಶಾಲಾ ಉಪಾಧ್ಯಾಯರು. ತಾಯಿ ಅಪ್ರತಿಮ ದೇಶಭಕ್ತೆ. ಈಕೆಯೇ ತನ್ನ ಮಗ ಸಚ್ಚಾರಿತ್ರನಾಗಿ ಬಾಳಲು ಪ್ರೇರಣೆಯಾದವರು. ತಂದೆ ತೀರಿಕೊಂಡ ಮೇಲೆ ಲಾಲ್‌ಬಹದ್ದೂರ್ ತಾಯಿಯೊಡನೆ ಮಿರ್ಜಾಪುರಕ್ಕೆ ಬಂದರು. ಅಲ್ಲಿಯೇ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ವಾರಣಾಸಿಗೆ ಬಂದು ಮುಂದಿನ ವಿದ್ಯಾಭ್ಯಾಸ ಕೈಗೊಂಡರು. ಅವರು ಸೇರಿದ್ದ ಹರಿಶ್ಚಂದ್ರ ವಿದ್ಯಾಲಯದಲ್ಲಿ ನಿಷ್ಕಾಮೇಶ್ವರ ಪ್ರಸಾದ ಮಿಶ್ರ ಎಂಬ ಗಣಿತ ಅಧ್ಯಾಪಕರು ಇವರ ಮೇಲೆ ಹೆಚ್ಚು ಪ್ರಭಾವ ಬೀರಿದರು. ಮಿಶ್ರಾ ಲಾಲ್‌ಬಹದ್ದೂರರಿಗೆ ಮಹಾ ಪುರುಷರ ಕಥೆಗಳನ್ನು ಹೇಳುವುದರ ಮೂಲಕ ದೇಶದ ಇತಿಹಾಸದ ಚಿತ್ರಣವನ್ನೇ ತೆರೆದಿಟ್ಟರು. ಮಿಶ್ರಾರ ಬೋಧನೆ ತರುಣ ಲಾಲ್‌ಬಹದ್ದೂರ್‌ನಲ್ಲಿ ದೇಶಪ್ರೇಮದ ಭದ್ರ ಬುನಾದಿಯನ್ನು ಹಾಕಿತು. ಆಗಲೇ ಪೂಜ್ಯ ಮಹಾತ್ಮ ಗಾಂಧೀಜಿಯವರು ಭಾರತದಲ್ಲಿ ಅಸಹಕಾರ ಚಳುವಳಿ (೧೯೨೦ ರಲ್ಲಿ) ಆರಂಭಿಸಿದ್ದರು. ಲಾಲ್ ಬಹದ್ದೂರ್‌ರು ಆ ಚಳುವಳಿಯಲ್ಲಿ ಭಾಗವಹಿಸಿ ಸ್ವಲ್ಪಕಾಲ ಜೈಲುವಾಸ ಶಿಕ್ಷೆ ಅನುಭವಿಸಿದರು. ಇವರ ವಿದ್ಯಾಭ್ಯಾಸ ಸ್ವಲ್ಪ ಕಾಲ ನಿಂತಿತ್ತು. ಬಿಡುಗಡೆಯಾದ ಬಳಿಕ ಅವರು ಕಾಶಿವಿದ್ಯಾ ಪೀಠವನ್ನು ಸೇರಿದರು. ೧೯೨೫ರಲ್ಲಿ ಆ ವಿದ್ಯಾಪೀಠದಿಂದ ಪದವೀಧರರಾಗಿ ಹೊರಬಂದು ಶಾಸ್ತ್ರಿ ಎಂಬ ಬಿರುದನ್ನು ಧರಿಸಿದರು. ಅಂದಿನಿಂದ ಅವರು ಲಾಲ್‌ಬಹದ್ದೂರ್ ಶಾಸ್ತ್ರಿಯಾದರು.

ಕುಟುಂಬದ ಹೊಣೆ ಅವರ ಮೇಲಿದ್ದಿತು. ಆದರೆ ಸ್ವಾತಂತ್ರ್ಯ ಸಂಗ್ರಾಮ ಅವರನ್ನು ಕೈಬೀಸಿ ಕರೆಯುತ್ತಿತ್ತು. ಅವರಿಗೆ ತಾಯಿನಾಡಿನ ಸೇವೆ ಮುಖ್ಯವೆನಿಸಿತು. ೧೯೨೬ ರಲ್ಲಿ ಮಹಾನ್ ದೇಶಭಕ್ತ ಲಾಲಾ ಲಜಪತ್‌ರಾಯ್ ಸ್ಥಾಪಿಸಿದ್ದ ಸರ್ವೆಂಟ್ಸ್ ಆಫ್ ದಿ ಪೀಪಲ್ ಸೊಸೈಟಿಯನ್ನು ಸೇರಿ ತನ್ಮೂಲಕ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು.

೧೯೩೦ರಲ್ಲಿ ಅಲಹಾಬಾರ್ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರೂ ಆದರು. ೧೯೩೬ರಲ್ಲಿ ಭಾರತದಲ್ಲಿ ಪ್ರಾಂತೀಯ ಚುನಾವಣೆಗಳು ನಡೆದು ೧೯೩೭ರಲ್ಲಿ ಶಾಸ್ತ್ರಿಗಳು ಉತ್ತರ ಪ್ರದೇಶದ ವಿಧಾನಸಭೆಗೆ ಚುನಾಯಿತರಾದರು. ಬಹುತೇಕ ೧೯೨೧ ರಿಂದ ೧೯೪೨ರವರೆಗಿನ ಎಲ್ಲಾ ರಾಷ್ಟ್ರೀಯ ಚಳುವಳಿಗಳಲ್ಲಿ ಶಾಸ್ತ್ರಿಗಳು ಭಾಗವಹಿಸಿದ್ದರು.

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಏಳು ಬಾರಿ ಜೈಲು ಶಿಕ್ಷೆ ಅನುಭವಿಸಿದರು. ಒಟ್ಟು ಒಂಭತ್ತು ವರ್ಷಗಳನ್ನು ಜೈಲಿನಲ್ಲಿ ಕಳೆದರು. ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿ (ಭಾರತ ಬಿಟ್ಟು ತೊಲಗಿ)ಯಲ್ಲಿ ಭಾಗವಹಿಸಿ ಜೈಲಿ ಸೇರಿದ್ದ ಇವರು ೧೯೪೬ರಲ್ಲಿ ಬಿಡುಗಡೆ ಹೊಂದಿದರು.

೧೯೫೨ರಲ್ಲಿ ನೆಹರೂರವರು ಶಾಸ್ತ್ರಿಯವರನ್ನು ಕೇಂದ್ರ ರೈಲ್ವೆ ಮಂತ್ರಿಗಳನ್ನಾಗಿ ನೇಮಿಸಿದರು. ಮುಂದೆ ಸಾರಿಗೆ, ಕೈಗಾರಿಕಾ ಸಚಿವರಾಗಿ ಸೇವೆ ಸಲ್ಲಿಸಿ ಸೈ ಎನಿಸಿ ಕೊಂಡರು. ಭಾರತದ ಪ್ರಥಮ ಪ್ರಧಾನಿ ಜವಾಹರ್‌ಲಾಲ್ ನೆಹರೂರವರು ೧೯೬೪ರ ಮೇ ೨೭ರಂದು ತೀರಿಕೊಂಡ ತರುವಾಯ ಇವರನ್ನು ಪ್ರಧಾನಿ ಹುದ್ದೆಗೆ ಕೂರಿಸಲಾಯಿತು. ಇವರು ತಮ್ಮ ದಕ್ಷ ಆಡಳಿತದಿಂದ ಜನಮನ ಗೆದ್ದು ಜನಾನುರಾಗಿ ಎನಿಸಿದರು. ಶಾಸ್ತ್ರಿಗಳ ಅಧಿಕಾರಾವಧಿಯಲ್ಲಿ ದೇಶದಲ್ಲಿ ಆಹಾರದ ಅಭಾವವಿತ್ತು, ನಿರುದ್ಯೋಗ, ಬಡತನ, ವಸತಿ, ಯುದ್ಧಭೀತಿ ಮೊದಲಾದ ಸಮಸ್ಯೆಗಳು ತಾಂಡವ

ವಾಡುತ್ತಿದ್ದವು. ಶಾಸ್ತ್ರಿಗಳು ಈ ಎಲ್ಲಾ ಸಮಸ್ಯೆಗಳನ್ನು ತಮ್ಮ ಜಾಣ್ಮೆಯಿಂದ ಪರಿಹರಿಸಿ ಚಾಣಾಕ್ಷತೆ ಮೆರೆದರು.

೧೯೪೮ರಿಂದ ಸುಮ್ಮನಿದ್ದ ನೆರೆರಾಷ್ಟ್ರ ಪಾಕಿಸ್ತಾನ ಕಾಶ್ಮೀರ ಗಡಿಯಲ್ಲಿ ತನ್ನ ಸೈನ್ಯವನ್ನು ನುಗ್ಗಿಸಿತು. ಭಾರತದ ಸೈನಿಕರು ಶಾಸ್ತ್ರಿಗಳ ನೇತೃತ್ವದಲ್ಲಿ ಪಾಕ್ ಸೈನಿಕರೊಡನೆ ಹೋರಾಡಿದರು. ಕೊನೆಗೆ ಜನರಲ್ ಆಯುಬ್‌ಖಾನ್ ಸೈನ್ಯವನ್ನು ಹಿಂದಕ್ಕೆ ಕರೆದುಕೊಂಡು ಯುದ್ಧ ಕೊನೆಗಾಣಿಸಲು ನೋಡಿದರು. ಆಗ ಶಾಸ್ತ್ರಿಗಳು ಭಾರತದ ರಕ್ಷಣೆಗಾಗಿ ನಾವು ಯುದ್ಧವನ್ನು ಮಾಡಿದ್ದೇವೆಯೇ ಹೊರತು ಪಾಕಿಸ್ತಾನ ನಮ್ಮ ಶತ್ರುರಾಷ್ಟ್ರವಲ್ಲ ಎಂಬ ಶಾಂತಿ ಸಂದೇಶವನ್ನು ಸಾರಿದರು.

ವಿಶ್ವಸಂಸ್ಥೆ ಯುದ್ಧಗಳನ್ನು ನಿಲ್ಲಿಸಲು ಮುಂದಾಗುವ ಸಂಸ್ಥೆ. ಅದು ಕದನ ಕೊನೆಗಾಣಿಸಲು ನಿರ್ಣಯಿಸಿತು. ಆಗ ರಷ್ಯಾದ ಅಧ್ಯಕ್ಷ ಕೊಸಿಗಿನ್ನಿ ಮಧ್ಯವರ್ತಿಯಾಗಿದ್ದು ಎರಡು ರಾಷ್ಟ್ರಗಳ ನಾಯಕರನ್ನು ಮಾತುಕತೆಗಾಗಿ ಆಹ್ವಾನಿಸಿದರು. ತಾಷ್ಕೆಂಟ್‌ನಲ್ಲಿ ೧೯೬೬ರ ಜನವರಿ ೩ರಂದು ಮಾತುಕತೆ ಆರಂಭವಾಯಿತು. ಎರಡೂ ದೇಶಗಳ ನಡುವೆ ಒಪ್ಪಂದ ನಡೆದು ಶಾಂತಿ ನೆನೆಸಿತು. ಯುದ್ಧ ಕೂಡದು ಎಂದು ಎರಡೂ ರಾಷ್ಟ್ರಗಳು ಒಪ್ಪಂದಕ್ಕೆ ಸಹಿ ಹಾಕಿದವು.

ದುರ್ದೈವ!! ರುಜು ಹಾಕಿದ ಕೆಲ ಹೊತ್ತಿನಲ್ಲಿಯೇ ಶಾಸ್ತ್ರಿಯವರು ಹೃದಯಾಘಾತಕ್ಕೀಡಾಗಿ ತೀರಿಕೊಂಡರು. ಅವರ ಸಾವು ಸಂಶಯಾತ್ಮಕ ಎಂಬುದು ಹಲವರ ಅನಿಸಿಕೆ. ಏನಾದರೇನು? ಈ ಯುದ್ಧವೀರ, ಶಾಂತಿದೂತ, ಚೀನೀ ಗಡಿಯಲ್ಲಿ ಕಳೆದುಹೋಗಿದ್ದ ಭಾರತದ ಗೌರವವನ್ನು ಮತ್ತೆ ವಿಶ್ವಭೂಪಟದಲ್ಲಿ ಸ್ಥಾಪಿಸಿದ ಮಹಾನ್ ರಾಜಕಾರಣಿ ಇನ್ನಿಲ್ಲವಾದರು. ಇಡೀ ರಾಷ್ಟ್ರವೇ ಇವರ ಸಾವಿಗಾಗಿ ಕಂಬನಿ ಮಿಡಿಯಿತು. ಅಂತಹ ಪ್ರಾತಃಸ್ಮರಣೀಯರು, ಪ್ರಾಮಾಣಿಕ ರಾಜಕಾರಣಿ ಶಾಸ್ತ್ರಿಗಳಾಗಿದ್ದರು. ಅವರಿಗೆ ಮರಣೋತ್ತರವಾಗಿ ಭಾರತ ಸರ್ಕಾರ ೧೯೬೬ರಲ್ಲಿ ಭಾರತರತ್ನ ಪ್ರಶಸ್ತಿ ನೀಡಿ ಗೌರವಿಸಿತು. ೧೯೭೬ರಲ್ಲಿ ಧರತಿ ಕಾ ಲಾಲ್ ಎಂಬ ಸಾವಿರ ಪುಟಗಳ ಅಭಿನಂದನಾ ಗ್ರಂಥವನ್ನು ಶಾಸ್ತ್ರಿಗಳ ನೆನಪಿಗಾಗಿ ಹೊರತರಲಾಯಿತು.

ಪ್ರಾಮಾಣಿಕತೆಗೆ ಇನ್ನೊಂದು ಹೆಸರೇ ಲಾಲ್ ಬಹಾದ್ದೂರ್ ಶಾಸ್ತ್ರಿ ಜೈ ಜವಾನ್ ಜೈ ಕಿಸಾನ್

*ಸೌಜನ್ಯ : ಪ್ರಜಾಪ್ರಗತಿ ೨-೧೦-೨೦೧೫*

## ಶ್ರೀವಾಣಿ

ನಗರ, ಗ್ರಾಮ, ನಾಡು, ಕಾಡು ಯಾವುದೇ ಇರಲಿ ಪರಮಾತ್ಮ ಒಂದು ಅಪೂರ್ವ ವಸ್ತು ಕೊಟ್ಟಿದ್ದಾನೆ. ಅದೇ ಮಾನವ ಜನ್ಮ. ಅದು ಅಮೂಲ್ಯವಾಗಿದೆ. ಅನಂತವಾಗಿದೆ. ಸೃಷ್ಟಿಯಲ್ಲಿ ಜೀವಜಂತುಗಳು ಅಸಂಖ್ಯವಾಗಿವೆ. ವೈವಿಧ್ಯಮಯವೆನಿಸಿವೆ. ಅವು ಜನ್ಮತಾಳಿದಂದಿನಿಂದ ಇಂದಿನ ಕಂಪ್ಯೂಟರ್ ಯುಗದವರೆಗೂ ತಮ್ಮಲ್ಲಿ ಯಾವುದೇ ಬದಲಾವಣೆ ಕಂಡಿಲ್ಲ. ಅಷ್ಟಿಷ್ಟು ದೈಹಿಕ ಬದಲಾವಣೆ ನಡೆದಿರಬಹುದು. ಅದೇ ಜೀವವಿಜ್ಞಾನಿಗಳಿಗೆ ಅಧ್ಯಯನದ ವಿಷಯವೂ ಆಗಿರುವುದು ನಿಜ. ಆದರೆ ಅವುಗಳ ಮೂಲಭೂತ ಮನೋಧರ್ಮದಲ್ಲಿ ವ್ಯತ್ಯಾಸ ವ್ಯಕ್ತವಾಗಿರುವುದಿಲ್ಲ. ಮನುಷ್ಯ ಹಾಗಲ್ಲ. ಕಾಲಕಾಲಕ್ಕೆ ಬದಲಾಗುತ್ತ ನಡೆದಿದ್ದಾನೆ. ಆದಿಮಾನವಸ್ತರದಿಂದ ಕಂಪ್ಯೂಟರ್ ತಯಾರಿಕೆಯವರೆಗೆ ಅವನ ವಿಚಾರಶಕ್ತಿ ವಿಕಾಸವಾಗಿದೆ. ತನ್ನ ಸುಖ ಭೋಗ ಜೀವನಕ್ಕೆ ಬೇಕಾಗುವ ಎಲ್ಲ ಸೌಲಭ್ಯಗಳನ್ನೂ ಉತ್ಪತ್ತಿಮಾಡಿಕೊಳ್ಳುತ್ತಿದ್ದಾನೆ. ಮನುಷ್ಯ ನಿತ್ಯ ಪರಿವರ್ತನಶೀಲ. ತನ್ನ ಜೀವನ ವಿಧಾನದಲ್ಲಿ ತುಂಬ ಬದಲಾಗುತ್ತಿದ್ದಾನೆ. ಆದರೆ ಬದಲಾಗಬೇಕಾದ ರೀತಿಯಲ್ಲಿ ಬದಲಾಗುತ್ತಿಲ್ಲ. ಸ್ವಾರ್ಥದ ಕಿರೀಟಧರಿಸುವುದರಲ್ಲೇ ಭಗೀರಥ ಪ್ರಯತ್ನ ಸಾಗಿಸಿದ್ದಾನೆ. ಮಹಾನುಭಾವರ ಜೀವನ ದೃಷ್ಟಿಯತ್ತ ಕಣ್ಣು ಹಾಯಿಸುತ್ತಿಲ್ಲ. ದೊಡ್ಡವರು ತಮ್ಮ ಸ್ವರೂಪದ ಬಗ್ಗೆ ತುಂಬ ಚಿಂತನೆ ಮಾಡಿದ್ದಾರೆ. ಮನುಷ್ಯನೆಂದರೆ ಬರೀ ದೇಹವಲ್ಲ. ಆತ್ಮ ಮತ್ತು ದೇಹಗಳು ಒಂದುಗೂಡಿದ ಘಟಕ. ಅದು ರತ್ನಪ್ರಾಯವಾದುದು. ಆ ಘಟಕದಲ್ಲಿ ಜ್ಞಾನರತ್ನ ಸ್ವಯಂ ಪ್ರಕಾಶವಾಗುವ ಸಾಧನೆ ಮಾಡಬೇಕೆಂದಿದ್ದಾರೆ. ಅದಕ್ಕಾಗಿ ನೀತಿ ಸಂಹಿತೆ, ಆಚಾರ ಸಂಹಿತೆ, ತತ್ವಸಂಹಿತೆ ಹಾಗೂ ಧರ್ಮಸಂಹಿತೆಗಳನ್ನು ರೂಪಿಸಿಕೊಟ್ಟಿದ್ದಾರೆ. ಸಾವಿರಾರು ವರ್ಷಗಳಿಂದ ಅನಂತದ ಕಡೆಗೆ ಮುಖಮಾಡಿ ಹೆಜ್ಜೆಯಿಡುತ್ತ ನಡೆದಿರುವ ಆತ್ಮಕ್ಕೆ ಈ ಜೀವನ ಸಂಹಿತೆ ದಾರಿದೀಪವಾಗಿದೆ. ಇಂಥ ಆತ್ಮವನ್ನು ''ನೈನಂ ಛಿದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ'' ಅವಿನಾಶಿಯಾದ ಆತ್ಮ ದೇಹ ಬದಲಾಯಿಸಬಹುದು, ತಾನು ಸಾಯುವುದಿಲ್ಲ, ಅದು ಅಮೃತರೂಪಿ. ಕಾಣಿಸದು ಹೊರಗಣ್ಣಿಗೆ. ಅನುಭವಕ್ಕೆ ವೇದ್ಯ, ಆನಂದವೇ ಅದರ ಗುರಿ.







# ಶರಣರ ತತ್ವಗಳು ಮತ್ತು ಲೋಹಿಯಾರ ಚಿಂತನೆಗಳು

- ಯು.ಎನ್. ಸಂಗನಾಳಮಠ *

ಹನ್ನೆರಡನೆಯ ಶತಮಾನದಲ್ಲಿ ಶರಣರು 'ಕ್ರಾಂತಿ' ಮಾಡಿದರು ಎಂದು ಹೇಳುತ್ತೇವೆ. ಕ್ರಾಂತಿ ಎಂದರೆ ಹಿಂಸೆ ರಕ್ತಪಾತ ಎಂಬ ಅರ್ಥಗಳಿಗೆ ನಾವು ಒಗ್ಗಿಕೊಂಡಿದ್ದೇವೆ. ಹಿಂಸೆ ರಕ್ತಪಾತದ ಕ್ರಾಂತಿ ಭಯವನ್ನು ಉಂಟುಮಾಡಿ ಆ ಭಯದ ವಾತಾವರಣ ಇರುವವರೆಗೆ ಕ್ರಾಂತಿಯ ಪರಿಣಾಮ ಇರುವುದು. ಆದರೆ ಶರಣರ ಕ್ರಾಂತಿ ಅಂತಹುದಲ್ಲ. ಅವರ ಕ್ರಾಂತಿ ಒಂದು ಪರಿವರ್ತನೆ. ಆ ಪರಿವರ್ತನೆಗೆ ಜನರ ಮನಸ್ಸನ್ನು ಸಿದ್ಧಗೊಳಿಸುವುದು, ಪರಂಪರೆಯ ವಿರುದ್ಧ ಕಂದಾಚಾರಗಳ ಮೇಲೆ ಅಮಾನವೀಯ ಮಾನವ ವರ್ತನೆಯ ಮೇಲೆ ಶೋಷಣೆ ವ್ಯವಸ್ಥೆಯ ಮೇಲೆ, ಕಿಲುಬುಗಟ್ಟಿದ ಮನಸ್ಸುಗಳ ಮೇಲೆ ನಡೆದ ಕ್ರಾಂತಿಯದು. ಲೋಹಿಯಾ ಸಹ ಇಂಥ ಕ್ರಾಂತಿಯ ಕನಸುಗಳನ್ನು ಕಂಡವರು.

ಇಪ್ಪತ್ತನೆಯ ಶತಮಾನದ ಡಾ॥ ಲೋಹಿಯಾ ತಮ್ಮ ಸಮಾಜವಾದಿ ಪಕ್ಷವು ಅನುಸರಿಸಬೇಕೆಂದು ಅಪೇಕ್ಷಿಸಿದ್ದ ಏಳು ಕ್ರಾಂತಿಸೂತ್ರಗಳನ್ನು ಈ ರೀತಿ ಉಲ್ಲೇಖಿಸಿದ್ದಾರೆ.

೧. ಗಂಡು-ಹೆಣ್ಣಿನ ಸಮಾನತೆ ಸಾಧಿಸುವುದು

೨. ಮೈಬಣ್ಣವನ್ನು ಆಧರಿಸಿದ ರಾಜಕೀಯ, ಆರ್ಥಿಕ, ಆಧ್ಯಾತ್ಮಿಕ ಅಸಮಾನತೆಯನ್ನು ನಿವಾರಿಸುವುದು.

೩. ಸಂಪ್ರದಾಯ ಸೃಷ್ಟಿಸಿದ ಹಿಂದುಳಿದ, ಮುಂದುವರಿದ ಜಾತಿ ಸಮುದಾಯಗಳ ನಡುವಿನ ಅಂತರವನ್ನು ಅಸಮಾನತೆಯನ್ನು ನಿವಾರಿಸುವುದು

೪. ವಿದೇಶಿ ಗುಲಾಮಗಿರಿಯನ್ನು ತೊಡೆದುಹಾಕಿ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವವಾದಿ ಆಳ್ವಿಕೆಯನ್ನು ತರುವುದು.

೫. ಆರ್ಥಿಕ ಸಮಾನತೆಯ ಮತ್ತು ಯೋಜಿತ ಉತ್ಪಾದನೆಯ ಪರವಾಗಿ ಹೋರಾಡುವುದು. ಖಾಸಗೀ ಬಂಡವಾಳದ ಅಸ್ತಿತ್ವವನ್ನು ಹಾಗೂ ಅದನ್ನು ಕುರಿತಾದ ವ್ಯಾಮೋಹವನ್ನು ತೊಡೆದು ಹಾಕುವುದು.

೬ ಖಾಸಗಿ ಬದುಕಿನ ಅತಿಕ್ರಮ ಪ್ರವೇಶದ ಅನ್ಯಾಯವನ್ನು ವಿರೋಧಿಸುವುದು.

೭ ಆಯುಧಗಳ ವಿರುದ್ಧ ಹೋರಾಟ ಮತ್ತು ಸತ್ಯಾಗ್ರಹದ ಮೂಲಕ ಕಾರ್ಯಸಾಧನೆ.

ಮೇಲೆ ಉಲ್ಲೇಖಿಸಿರುವ ಲೋಹಿಯಾರವರ ಸಪ್ತ ಕ್ರಾಂತಿಗಳಲ್ಲಿ ಕೊನೆಯ ಎರಡನ್ನೂ ಬಿಟ್ಟರೆ ಶರಣರ ಚಿಂತನೆಗಳಲ್ಲಿ ನಾವು ಕಾಣಬಹುದು. ಶರಣರ ಚಳವಳಿಯಲ್ಲಿ (ಕ್ರಾಂತಿಯಲ್ಲಿ) ಲೋಹಿಯಾರ ಸಪ್ತಕ್ರಾಂತಿಗಳಲ್ಲಿ ಹಲವು ರೀತಿಯ ಸಮಾನತೆ ಸಾಮ್ಯತೆಯನ್ನು ಕಾಣಬಹುದು.

ವಚನಕಾರರ ದೃಷ್ಟಿಯಲ್ಲಿ ಗಂಡು-ಹೆಣ್ಣುಗಳ ನಡುವೆ ಭೇದವಿಲ್ಲ. ಅವರಿಬ್ಬರೂ ಸೇರಿದ ಬದುಕು ಅರ್ಥಪೂರ್ಣವಾಗಿರುತ್ತದೆ. ವ್ಯಕ್ತಿಸ್ವಾತಂತ್ರ್ಯವನ್ನು ಸರಿಸಮಾನಗೊಳಿಸಲು ಶರಣರು ತೋರಿದ ಹಾದಿಯದು. 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ, ಸತಿಪತಿಗಳೊಂದಾಗದ ಭಕ್ತಿ ಅಮೃತದೊಳು ವಿಷವ ಬೆರೆಸಿದಂತೆ ಕಾಣಾ ರಾಮನಾಥ' ಎಂದಿದ್ದಾರೆ. ವಿಶ್ವದಲ್ಲಿಯೇ ಸ್ತ್ರೀ ಸ್ವಾತಂತ್ರ್ಯದ ಪ್ರಥಮ ಚಳವಳಿ ಎನಿಸಿಕೊಳ್ಳುತ್ತದೆ. ಹೆಣ್ಣು-ಗಂಡು ಎನ್ನುವುದು ಪ್ರಕೃತಿ ಸಹಜ, ಸಾಮಾಜಿಕ ಸ್ಥಾನಮಾನಗಳಿಗೆ, ಬೌದ್ಧಿಕ ಆಯಾಮಗಳಿಗೆ ಹೆಣ್ಣು-ಗಂಡಿಗೆ ತಾರತಮ್ಯವಿಲ್ಲ ಎಂಬುದನ್ನು ಶರಣರು ಹೇಳಿದ್ದಾರೆ. ಶರಣರು ಅಲ್ಲದೇ ಅದೇ ಕಾಲದಲ್ಲಿದ್ದ ಪ್ರಜ್ಞಾವಂತ ಸ್ತ್ರೀಯರ ಪೈಕಿ ಸುಮಾರು ನಲ್ವತ್ತು ಜನರು ವಚನಕಾರ್ತಿಯರಿದ್ದರು ಎಂಬುದು ಸಾಮಾನ್ಯ ಸಂಗತಿಯಲ್ಲ. ವಚನಗಳ ಮೂಲಕ ಅಭಿವ್ಯಕ್ತಿಸದಿದ್ದವರು ಇನ್ನೂ ಎಷ್ಟೋ ಶಿವಶರಣೆಯರಿದ್ದರೋ, ಸಂಸ್ಕೃತಿ. ಸಮಾಜದ ಹೆಸರಿನಲ್ಲಿ ಟೊಳ್ಳು ಮೌಲ್ಯಗಳನ್ನು

* 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ, ೧ನೇ ಒಳತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ-೫೭೭ ೨೧೭.

ಪ್ರತಿಭಟಿಸುತ್ತ ಸ್ತ್ರೀವಾದಿ ನೆಲೆಯಲ್ಲಿ ಸ್ತ್ರೀಪರ ಧೋರಣೆಗಳನ್ನು ತಮ್ಮ ವಚನಗಳಲ್ಲಿ ದಾಖಲಿಸಿದ ವಚನಕಾರ್ತಿಯರಲ್ಲಿ ಅಕ್ಕಮಹಾದೇವಿ, ಗೊಗ್ಗವ್ವೆ ಕಾಳವ್ವೆ, ಆಯ್ದಕ್ಕಿ ಲಕ್ಕಮ್ಮ, ಅಕ್ಕಮ್ಮ, ಅಮುಗೆ ರಾಯಮ್ಮ ಪ್ರಮುಖರು. ಒಳಗೆ ಸುಳಿವ ಆತ್ಮನು ಗಂಡು ಅಲ್ಲ ಹೆಣ್ಣು ಅಲ್ಲ ಎಂದು ಹೇಳಿದ ಜೇಡರ ದಾಸಿಮಯ್ಯ, ಆಯ್ದಕ್ಕಿ ಲಕ್ಕಮ್ಮ ವೈಜ್ಞಾನಿಕ ತರ್ಕದಿಂದ ಗಂಡುಹೆಣ್ಣಿನ ಸಮಾನತೆಯನ್ನು

*ಆವ ಬೀಜ ಬೀಳುವಲ್ಲಿ ಮೊಳೆಮುಖ ಹಿಂಚುಮುಂದುಂಟೇ*
*ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದುಂಟೇ?*
*ಮೂಲ ನಷ್ಟವಾದಲ್ಲಿ ಅಂಕುಶ ನಿಂದಿತ್ತು*
*ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೇ*
*ಅರಿವಿಂಗೆ ಬೇರೊಂದೊಡಲುಂಟೇ?*
*ಬೇರೊಂದಡಿಯಿಡದಿರು*
*ಮಾರಯ್ಯ ಪ್ರಿಯ ಅಮರೇಶ್ವರಲಿಂಗವನರಿಯಬಲ್ಲರೆ*

ಸತಿ-ಪತಿ ಎಂಬ ಭೇದ ಕೂಟಕ್ಕೆ ಮಾತ್ರ ಅರಿವಿಗೆ ಜ್ಞಾನಕ್ಕೆ ಈ ಇಬ್ಬಗೆಯ ಭೇದವಿಲ್ಲ ಎಂದು ಲಕ್ಕಮ್ಮ ಬೀಜದ ಮೊಳೆಯುವಿಕೆಯನ್ನು ಪ್ರತಿಮೆಯಾಗಿ ಬಳಸಿ ಗಂಡು-ಹೆಣ್ಣಿನ ಅಭೇದವನ್ನು ಹೇಳಿದ್ದಾರೆ.

ಶರಣರು ಲಿಂಗಭೇದವನ್ನು ಸಾಮಾಜಿಕ ಸಂಗತಿ ಎಂದು ಪರಿಗಣಿಸಿದರೇ ಹೊರತು ಅದು ಜನ್ಮದಿಂದ ಪ್ರಾಪ್ತವಾದ ಭೇದ ಅಲ್ಲ ಎಂದು ಸಾರಿದರು. ಸಾಮಾನ್ಯ ಸ್ತರದಿಂದ ಶರಣರು ಬೆಳೆದು ಬಂದಂತೆ, ಶರಣೆಯರೂ ಸಾಮಾಜಿಕ ಕ್ರಾಂತಿಯ ಮೂಲಕ ಸಾಧನೆಯ ಶಿಖರ ಏರಿದರು. 'ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ' ಎಂದು ಪತಿಯನ್ನೇ ಎಚ್ಚರಿಸುವ ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮ, ಮೋಳಿಗೆ ಮಾರಯ್ಯನ ಸಾಧನೆಯಲ್ಲಿ ಊರುಗೋಲಾಗಿ ನಿಂತ ಮಹಾದೇವಮ್ಮ, ಹಡಪದ ಅಪ್ಪಣ್ಣನ ಕಾಯಕ ನಿಷ್ಠೆಯಲ್ಲಿ ನಿರತಳಾದ ಕದಳಿಯ ತುದಿಯನ್ನು ಏರಿದ ಲಿಂಗಮ್ಮ ಮುಂತಾದ ಶಿವಶರಣೆ ಯರು ಸ್ತ್ರೀ ಸಮಾನತೆಯ ಸಾಕಾರ ಮೂರ್ತಿಗಳು.

ಲೋಹಿಯಾ ಅವರು ಇಂದಿನ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳ ಸ್ಥಿತಿ ಕುರಿತು ಬಹಳ ಹಿಂದೆಯೇ ಹೇಳಿದ್ದರು. ಆಗಿನ ಸ್ಥಿತಿ ಈಗಲೂ ಹಾಗೇ ಬಹಳ ಪ್ರಮಾಣದಲ್ಲಿದೆ. 'ಭಾರತದ ಬಹುಸಂಖ್ಯಾತ ಮಹಿಳೆಯರ ಸಮಸ್ಯೆ ಎಂದರೆ, ನೀರಿಲ್ಲದ ನಲ್ಲಿಗಳು ಮತ್ತು ಕಕ್ಕಸುಗಳ ಕೊರತೆ. ಹಳ್ಳಿಗಳಲ್ಲಿ ಹೆಣ್ಣುಮಕ್ಕಳು ಪ್ರತಿದಿನ ಬೆಳಿಗ್ಗೆ ಸಂಜೆ ದೂರದ ಬಾವಿ/ಕೆರೆ ಕೊಳಗಳಿಂದ ನೀರನ್ನು ಹೊತ್ತು ತರಬೇಕು. (ಈಗ ನಲ್ಲಿ ಇದ್ದರೂ ನೀರು ಸಕಾಲಕ್ಕೆ ಬರುವುದಿಲ್ಲ) ಶೌಚಕ್ಕೆ ಹೋಗುವುದು ಸೂರ್ಯೋದಯದ ಮುನ್ನ, ಸೂರ್ಯಾಸ್ತದ ನಂತರ ಬಯಲು ಜಾಗಕ್ಕೆ. ಅಡಿಗೆ ಮನೆಯಲ್ಲಿ ಬಂಧಿ. ಮಹಿಳೆಯರ ವಿಮೋಚನೆಗಾಗಿ ಲೋಹಿಯಾ ಹೋರಾಟ. ೧೯೫೭ರ ಕಾನ್ಪುರ್ ಸಮ್ಮೇಳನದಲ್ಲಿ – ಪ್ರತಿಯೊಬ್ಬ ರಾಜನಾದರೆ, ಹೆಂಗಸರು ತಮ್ಮ ಹಕ್ಕಿನಿಂದ ರಾಣಿ ಆಗಬೇಕು. ರಾಜನ ಪತ್ನಿ ರಾಣಿ ಆಗಿ ಅಲ್ಲ' ಈ ಮಾತಿನ ಅರ್ಥ ಪ್ರತಿ ಹೆಣ್ಣು ತನ್ನ ಸಾಮರ್ಥ್ಯದಿಂದ ಬದುಕಬೇಕು ಎಂದರು. ಹೆಣ್ಣು ಎಲ್ಲಿಯವರೆಗೆ ಸ್ವತಂತ್ರಳಾಗುವುದಿಲ್ಲ. ಅಲ್ಲಿಯವರೆಗೆ ಗಂಡು ಸ್ವತಂತ್ರವಾಗುವುದಿಲ್ಲ.

ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಹರಳಯ್ಯ ಇವರೆಲ್ಲ ಸಮಾಜದ ಕೆಳವರ್ಗದ ವರ್ಣಹೀನ ಜನರು, ಮಾನವತೆಯ ನೆಲಗಟ್ಟಿನ ಮೇಲೆ ಶರಣ ಸಮಾಜ ಕಟ್ಟುವುದಕ್ಕಾಗಿ ವರ್ಣವಿಲ್ಲದವರಲ್ಲಿ ಬೆರೆತರು. ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಭಾವನೆ ಅವರದಾಗಿತ್ತು. ಪುರೋಹಿತ ವರ್ಗಕ್ಕೆ ಸೇರಿದ ಉರಿಲಿಂಗ ದೇವ ಎಂಬ ಮಠಾಧಿಪತಿ ಪೆದ್ದಿ ಎಂಬ ಶೂದ್ರನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ದೀಕ್ಷೆಕೊಟ್ಟು ಪೆದ್ದನಾಗಿದ್ದ ಪೆದ್ದಿ ಉರಿಲಿಂಗಪೆದ್ದಿ ಆದದ್ದು ಒಂದು ಸಾಧನೆ. ಉರಿಲಿಂಗ ಪೆದ್ದಿ ವಚನಗಳನ್ನು ರಚಿಸಿದ, ಸಂಸ್ಕೃತದ ಆಕರಗಳನ್ನು ಬಳಸಿವೆ. ಪತ್ನಿ ಕಾಳವ್ವೆ ಸಹ ವಚನಕಾರ್ತಿಯಾದಳು. ಹೆಂಡದ ಮಾರಿತಂದೆ, ಬಹುರೂಪಿ ಚೌಡಯ್ಯ, ಢಕ್ಕೆಯ ಬೊಮ್ಮಣ್ಣ, ಅಂಬಿಗರ ಚೌಡಯ್ಯ, ಸೂಳೆ ಸಂಕವ್ವೆ, ಸತ್ಯಕ್ಕ ಇವರೆಲ್ಲ ಕೆಳವರ್ಗದವರೇ. 'ನಟ' ಜಾತಿಗೆ ಸೇರಿದ ಅಲ್ಲಮಪ್ರಭು ಶೂನ್ಯಸಿಂಹಾಸನಾಧೀಶ್ವರರಾಗಿದ್ದರು. ಇವರಲ್ಲಿ ಉಚ್ಚವರ್ಣದ ಜನಾಂಗದೊಡನೆ ತಾಮರಸ್ಯದಿಂದ ಇದ್ದರು. ಮೈಬಣ್ಣವನ್ನು ಆಧರಿಸಿದ ರಾಜಕೀಯ, ಆರ್ಥಿಕ, ಆಧ್ಯಾತ್ಮಿಕ ಅಸಮಾನತೆಯ ವಿರುದ್ಧ ಹೋರಾಟವನ್ನು ಸಾರಿದ ಲೋಹಿಯಾ ಅವರ ತತ್ತ್ವ ಶರಣರ ಕಾಲದಲ್ಲಿ ಒಂದು ಮಾದರಿಯಾಗಿ ನೈಜವಾಗಿ ಇದ್ದಿತು.





ಬಹುಪಾಲು ಶರಣರ ನಿಲುವು ಧರ್ಮ ಜಾತಿ ಸಂಬಂಧ ನಿಲುವು ಒಂದೇ ಆಗಿತ್ತು. ಪುರೋಹಿತ ಕರ್ಮಠತನ ಬಯಲಿಗೆಳೆದರು. ವರ್ಣಜಾತಿ ವ್ಯವಸ್ಥೆ ಹೋದಾಗ ಸಮಾನತೆ ಸಾಧ್ಯ. ಆಗಿನ ಕಾಲದಲ್ಲಿ ಉತ್ತಮರ ಸೇವೆ ಮಾಡುವುದು ಶೂದ್ರನ ಕೆಲಸ. ಅಸ್ಪೃಶ್ಯ, ಅತಿಕೀಳು ಕೆಲಸಗಳಿಗೆ ಮೀಸಲು. ಅದಕ್ಕೆ ಅಸ್ಪೃಶ್ಯನಿಗೆ ದೇವಾಲಯ ಪ್ರವೇಶ ನಿಷಿದ್ಧವಾಗಿತ್ತು. ಶೋಷಣೆಯ ಕೇಂದ್ರಗಳಾಗಿದ್ದ ದೇವಾಲಯಗಳನ್ನು ಬಸವಣ್ಣ ನಿರಾಕರಿಸಿದರು. ಅದಕ್ಕೆ ಎಲ್ಲರಿಗೂ ಜಂಗಮಲಿಂಗ ಕೊಟ್ಟು ದೇಹವನ್ನೇ ಚಲಿಸುವ ದೇವಾಲಯ ಎಂದರು. ಅಸ್ಪೃಶ್ಯರಿಗೂ ಜಂಗಮಲಿಂಗ ಕೊಟ್ಟು ಎಲ್ಲರೊಂದಿಗೆ ಸಮಾನಗೊಳಿಸಿ ಅವರಲ್ಲಿ ಆತ್ಮ ವಿಶ್ವಾಸ ಬೆಳೆಸಿದರು. ಸ್ಥಾವರಕ್ಕಳಿಉಂಟು ಜಂಗಮಕ್ಕಳಿವಿಲ್ಲ ಎಂದರು. ಇವನಾರವ ಇವನಾರವ ಎಂದೆನಿಸದೆ ಇವನಮ್ಮವ ಇವನಮ್ಮವ ಎಂದೆನಿಸಯ್ಯಾ ಎಂದರು.

ಜಾತಿ ನಾವಾಗಿಯೇ ಮಾಡಿಕೊಂಡದ್ದು ವೃತ್ತಿ ಮಾಡುವ ಉದ್ಯೋಗದ ಆಧಾರದಿಂದ ಜಾತಿಪಟ್ಟ ಬಂದಿತು. ಕುರಿ ಕಾಯುವವ ಕುರುಬ, ಪಶುಪಾಲನೆ ಮಾಡುವ ಗೊಲ್ಲನಾದ, ವ್ಯವಸಾಯ ಮಾಡುವವ ಒಕ್ಕಲಿಗನಾದ, ಕಬ್ಬಿಣದ ಕೆಲಸ ಮಾಡುವವ ಕಮ್ಮಾರನಾದ, ಇತ್ಯಾದಿ. ಒಂದು ಅರ್ಥದಲ್ಲಿ ಪ್ರತಿಯೊಬ್ಬ ಮನುಷ್ಯನು ಸಂದರ್ಭಾನು ಸಾರ ಅಗಸ, ಕುಂಬಾರ, ಕುರುಬ, ಸಮಗಾರ ಆಗಲೇ ಬೇಕಾಗುತ್ತದೆ. ಈ ಕೃತಕ ಜಾತಿ ಭೂತವನ್ನೇ ಮನುಷ್ಯತ್ವವನ್ನೇ ನಾಶಪಡಿಸಿದೆ.

*ನೆಲವೊಂದೆ-ಹೊಲಗೇರಿ ಶಿವಾಲಯಕ್ಕೆ*
*ಕುಲವೊಂದೆ ತನ್ನತಾವರಿದವರಿಗೆ*
*ಕುಲವೊಂದೆ ಷಡ್ದರ್ಶನ ಮುಕ್ತಿಗೆ*
*ನಿಲುವೊಂದೇ ಕೂಡಲಸಂಗಮದೇವ*
*ನಿಮ್ಮನರಿದವಂಗೆ*
*ತನ್ನ ತಾನರಿದವಂಗೆ ಎಲ್ಲ ಕುಲಗಳೂ ಶಿವಕುಲಗಳು.*

ನಿಜವಾದ ಕುಲಜರು ಎಂದರೆ ಸಕಲ ಜೀವಾತ್ಮನಿಗೆ ಲೇಸನ್ನೇ ಬಯಸುವವರು ಎಂದಿದ್ದಾರೆ ಬಸವಣ್ಣನವರು.

ಲೋಹಿಯಾರು ಹೇಳಿದ ಜಾತಿ ಸಮುದಾಯಗಳ ಅಸಮಾನತೆ ನಿವಾರಿಸಲು ಶರಣರು ಆಗಿನ ಕಾಲದಲ್ಲಿ ಪ್ರಯತ್ನಿಸಿದ್ದರು.

ಶರಣರ ಕಾಲದಲ್ಲಿ ಆಧುನಿಕ ಪರಿಕಲ್ಪನೆಯ ರಾಜಕೀಯ ಪ್ರಜಾಪ್ರಭುತ್ವ ವ್ಯವಸ್ಥೆ ಇಲ್ಲದಿರಬಹುದು. ಆದರೆ ಧಾರ್ಮಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಜಾ ಪ್ರಭುತ್ವವನ್ನು ಪ್ರಪ್ರಥಮವಾಗಿ ವಿನ್ಯಾಸಗೊಳಿಸಿ ವೃತ್ತಿಗೌರವ, ಕಾಯಕತತ್ತ್ವ, ವೈಯಕ್ತಿಕ ಪ್ರಾಮಾಣಿಕತೆ, ಕುಲಸಂಬಂಧ, ಇತ್ಯಾದಿಗಳನ್ನು ಶರಣರ ವಚನಗಳಲ್ಲಿ ಕಾಣಬಹುದು. ಬಸವಣ್ಣನವರು ಆರ್ಥಿಕ, ಸಾಮಾಜಿಕ ಸಮಾನತೆ ಸಾಧಿಸಿದರು. ಆರ್ಥಿಕ ಚಟುವಟಿಕೆಯಲ್ಲಿ ಉತ್ಪಾದಿಸಲ್ಪಟ್ಟ ವಸ್ತುಗಳು ಅನುಭೋಗಿಸಲ್ಪಟ್ಟರೆ ಜನರ ಬಯಕೆಗಳು ಪೂರೈಕೆಯಾಗುತ್ತವೆ. ಇದೇ ಕಾಯಕ ತತ್ತ್ವ ಪ್ರತಿ ವ್ಯಕ್ತಿ ಉತ್ಪಾದನೆಯಲ್ಲಿ ತೊಡಗಬೇಕು. ಕಾಮ ಇರುವವರೆಗೆ ಮೋಸ ವಂಚನೆ ರಹಿತವಾಗಿ ಕೆಲಸ ಮಾಡುವುದೇ ಕಾಯಕವೇ ಕೈಲಾಸ. ಮಾಡುವವರು ಬೇಡುವವರಾಗದೇ ನೀಡುವವರಾಗಬೇಕು ಎಂಬುದು ಬಸವಣ್ಣನವರ ಆಶಯ. ಮಾನವಶಕ್ತಿ ಕಾಯಕವಾಗಿ ಪರಿವರ್ತನೆ ಆದಾಗಲೇ ಸಾರ್ಥಕ. ಕಾಯಕ, ಬದುಕಿನ ಪ್ರತೀಕವಾದರೆ ಬದುಕು ಉತ್ಪಾದನೆಯ ಪ್ರತೀಕ. ಕಾಯಕದಲ್ಲಿ 'ಸಂಗ್ರಹ'ಕ್ಕೆ ಸ್ಥಾನವಿಲ್ಲ. ಸಮಾನ ಸಮರ್ಪಣೆಗಾಗಿ ಸಂಪಾದನೆ ಎನ್ನುವ ತತ್ತ್ವ ಇಲ್ಲದೆ ಇಲ್ಲಿ ನಿರುದ್ಯೋಗಕ್ಕೆ ಪರಿಹಾರ ಸಿಗುವುದು. ಸಮಾಜವಾದದ ಮೂಲತತ್ತ್ವ ಇದು. ಸಂಪಾದಿಸಿದ್ದನ್ನು ಅವಶ್ಯಕತೆಗೆ ಮಾತ್ರ ಉಪಯೋಗಿಸಿ ಮಿಕ್ಕದ್ದನ್ನು ದುರ್ಬಳಕೆ ಮಾಡದೇ ಸಮಾಜದ ಉಪಯೋಗಕ್ಕೆ ದುರ್ಬಲರಿಗಾಗಿ ಉಪಯೋಗಿಸಿದರೆ ಸಕಲ ಜೀವಾತ್ಮರಿಗೆ ಲೇಸನು ಬಯಸಿದಂತೆ. ಇದುವೇ ಈಗಿನ ಕಲ್ಯಾಣ ರಾಷ್ಟ್ರದ ಗುರಿ. ಬಸವಣ್ಣನವರು ರಚಿಸಿದ ಅಂದಿನ ಸಮಾಜ ಶರಣರ, ಶರಣರಿಂದ, ಶರಣರಿಗೋಸ್ಕರ ಆಗಿತ್ತು.

*ಲಂಚವಂಚನಕ್ಕೆ ಕೈಯಾನನ ಭಾಷೆ*
*ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದಡೆ*
*ನಾನು ಕೈ ಮುಟ್ಟಿ ಎತ್ತಿದೆನಾದಡೆ ನಿಮ್ಮಾಣೆ*
*ಪ್ರಮಥರಾಣೆ ಅದೇನು ಕಾರಣವೆಂದಡೆ ನೀನಿಕ್ಕಿದ*
*ಭಿಕ್ಷದಲ್ಲಿಪ್ಪೆನಾಗಿ ಇಂತಲ್ಲದೆ ನಾನು ಅಳಿಮನವ*
*ಮಾಡಿ ಪರದ್ರವ್ಯಕ್ಕೆ ಆಸೆ ಮಾಡಿದೆನಾದಡೆ*
*ನೀನಾಗಲೇ ಎನ್ನ ನರಕದಲ್ಲಿ ಅದ್ದಿ*
*ನೀನಿದ್ದು ನೋಡಾ ಶಂಭುಜಕೇಶ್ವರಾ*

ಎಂದು ವಚನಕಾರ್ತಿ ಸತ್ಯಕ್ಕ ವೈಯಕ್ತಿಕ ಪ್ರಾಮಾಣಿಕತೆಯನ್ನು ಮೆರೆದಿದ್ದಾರೆ.

*ಊರ ಮುಂದೆ ಹಾಲ ಹಳ್ಳ ಹರಿವುತ್ತಿರಲು*
*ಓರೆಯಾವಿನ ಬೆನ್ನ ಹರಿಯಲದೇಕಯ್ಯಾ?*
*ಲಜ್ಜೆಗೆಡಲೇ ನಾಣುಗೆಡಲೇಕೆ*
*ಕೂಡಲಸಂಗಮದೇವನುಳ್ಳನ್ನಕ್ಕ*
*ಬಿಜ್ಜಳನ ಭಂಡಾರವೇನಾಗೇಕಯ್ಯಾ?*

ಎಂದು ಬಸವಣ್ಣ ಸರಕಾರದ ಬೊಕ್ಕಸದ ಬಗ್ಗೆ ಹೇಳಿದ್ದಾನೆ.

*ತಂದೆಯ ಮಗ ಕರೆದು ಮಗನ ತಂದೆ ಕರೆದು*
*ಭಾವನ ಮೈದುನಕರೆದು ಮೈದುನ ಭಾವನ ಕರೆದು*
*ತಮ್ಮ ಬಂಧುಗಳೇ ಜಂಗಮ ಎಂದು ಕೂಡಿಕೊಂಡ*
*ಎಂಬ ಜಗಭಂಡರ ನೇನು ಸುಸಂಗವಲ್ಲ ಏಲೇಶ್ವರಲಿಂಗಕ್ಕೆ*
*ಎಂದು ಸ್ವಪರಿವಾರ ಸಲ್ಲದು*

ಎಂಬ ಬಗ್ಗೆ ಏಲೇಶ್ವರ ಕೇತಯ್ಯ ಹೇಳಿದ್ದಾರೆ.

ಬಸವಣ್ಣನವರು ಮತ್ತು ಲೋಹಿಯಾ ತಮ್ಮ ತಮ್ಮ ಕಾಲದಲ್ಲಿ ಮಹಿಳೆಯರ ಉದ್ಧಾರಕ್ಕಾಗಿ ಹೋರಾಟ, ಜಾತಿ ವ್ಯವಸ್ಥೆಯ ವಿರುದ್ಧ ಪ್ರಬಲ ಆಂದೋಲನ, ಮಾತೃ ಭಾಷೆಯ ಬಳಕೆ, ಆಡಳಿತ ವಿಕೇಂದ್ರೀಕರಣಕ್ಕೆ ಕ್ರಮಗಳನ್ನು ಕೈಗೊಂಡಿದ್ದರು. ಲೋಹಿಯಾ 'ಜಾತಿಯನ್ನು ಪೂಜಿಸಿ' ಚಳವಳಿಗಾಗಿ ವಿಶೇಷ ವೇದಿಕೆ ಸಿದ್ಧಪಡಿಸಿದ್ದರು.

ಬಸವಣ್ಣ ಮತ್ತು ಲೋಹಿಯಾರ ತುಡಿತ ಉತ್ತಮ ಮಾನವರನ್ನು ಸೃಷ್ಟಿಸುವುದು. ಲೋಹಿಯಾರ ಮಹತ್ವಾಕಾಂಕ್ಷೆಯ ಕನಸು ವಿಶ್ವ ಸಂಸತ್ತು ಸ್ಥಾಪನೆ, ಬಸವಣ್ಣನವರು ಆಗಲೇ ಅನುಭವ ಮಂಟಪವನ್ನು ಸ್ಥಾಪಿಸಿಯಾಗಿತ್ತು.

ಡಾ|| ಲೋಹಿಯಾ ಬಸವಣ್ಣ ಇವರಿಬ್ಬರೂ ಪ್ರವಾದಿಗಳೇ. ಯಾವ ಪ್ರವಾದಿಯಾಗಲೀ ಅವರು ಬದುಕಿದ್ದಾಗ ಅವರ ತತ್ತ್ವಗಳನ್ನು, ವಿಚಾರಗಳನ್ನು ದೃಷ್ಟಿ ಕೋನಗಳನ್ನು ಒಪ್ಪಿಕೊಂಡಿದ್ದು ಬಹಳ ವಿರಳ ವಿರೋಧಿಸು ವವರೇ ಹೆಚ್ಚು. ಸಾಕ್ರೆಟಿಸ್ ಸಹ ಇದಕ್ಕೆ ಒಳಗಾಗಿ ವಿಷಪ್ರಾಶನ ಎಂಬ ಘೋರ ಶಿಕ್ಷೆಗೆ ಬಲಿಯಾದರು. ಯೇಸುಕ್ರಿಸ್ತ ಸಹ ತಮ್ಮ ವಿರೋಧಿಗಳನ್ನು ಕುರಿತು 'ಅವರು ಅಮಾಯಕರು, ತಾವು ಏನು ಮಾಡುತ್ತಿದ್ದೇವೆ ಎಂಬುದು ಅವರು ಅರಿಯರು. ದೇವರೇ ಅವರನ್ನು ಕ್ಷಮಿಸು' ಎಂದರು. ಯೇಸುವಿನ ನಂತರ ಜನ ಅವರನ್ನು ಅರಿತರು. ಹಾಗೇ ಬಸವಣ್ಣನವರಿಗೆ ಲೋಹಿಯಾರಿಗೆ ಶರಣರ ನುಡಿಗಳಿಗೆ ಈಗ ನಾವು ಚಿಂತಿಸುತ್ತಿದ್ದೇವೆ.

ಸಾಮಾಜಿಕವಾಗಿ ಜಾತಿ, ಲಿಂಗ, ವರ್ಣಭೇದ ಎಣಿಸದೆ ಆರ್ಥಿಕವಾಗಿ ಕಾಯಕ ತತ್ತ್ವದ ತಿರುಳಾದ ದುಡಿಮೆಯು ಎಲ್ಲರ ಹಕ್ಕು ಹೊಣೆಗಾರಿಕೆ ಎಂಬುದನ್ನು ಮತ್ತು ಸತ್ಯಶುದ್ಧ ಕಾಯಕದಿಂದ ಸಂಗ್ರಹವಾದುದ್ದನ್ನು ದಾಸೋಹದ ಮೂಲಕ ಜನರಿಗೆ ಹಂಚಬೇಕೆಂಬ ವಿಚಾರಗಳು ಭವಿಗಳ ಮನಸ್ಸನ್ನು ಪರಿವರ್ತಿಸುವ ಪ್ರಕ್ರಿಯೆಯನ್ನು, ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ತತ್ತ್ವವನ್ನು ಸಮಗ್ರವಾಗಿ ಆಂತರ್ಯದ ದೃಷ್ಟಿಯಿಂದ ನೋಡಿದಾಗ ವಿಚಾರ ಮಾಡಿದಾಗ ಅಂದಿನ ಸಮಾಜ ವಾದದ ಶರಣರ ಕಲ್ಪನೆ, ಲೋಹಿಯಾರವರ ಸಮಾಜವಾದಿ ಕೆಲ ತತ್ತ್ವಗಳಿಗೆ ಸಂಬಂಧ ಇರುವುದನ್ನು ಗುರುತಿಸಬಹುದು.

ಲೋಹಿಮಾರವರಿಗೆ ಶರಣರ ಚಳವಳಿಯ ಪೂರ್ಣ ಪರಿಚಯ ಇತ್ತು ಎನ್ನುವುದಕ್ಕೆ 'ದ್ರೌಪದಿಯೇ ಸಾವಿತ್ರಿಯೋ' ಎಂಬ ಲೇಖನದಲ್ಲಿ ಅಕ್ಕ ಮಹಾದೇವಿಯನ್ನು ಪ್ರಸ್ತಾಪಿಸುತ್ತಾ–

ಆಧ್ಯಾತ್ಮಿಕ ಸಮಾನತೆಯಲ್ಲಿ ಮುಂಚೂಣಿಯಲ್ಲಿರುವ ಮಹಾನ್ ಮಹಿಳೆಯೊಬ್ಬಳು ಎಂಟುನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿದ್ದಳು. ಬಟ್ಟೆಯನ್ನು ಸರ್ವಥಾ ತ್ಯಜಿಸಿದಳು. ವೈರಾಗ್ಯ ಸಾಧು ದರ್ಶನ ಇತ್ಯಾದಿಗಳಲ್ಲಿ ಗಂಡಸು ಕೊನೆಯ ಎತ್ತರದ ತನಕ ತಲುಪಿ ವಿರಕ್ತನಾಗು ವಂತೆ ಹೆಣ್ಣಾದ ತಾನೂ ಆ ಎತ್ತರಕ್ಕೆ ಏರಲು ಯಾಕೆ ಸಾಧ್ಯವಾಗುವುದಿಲ್ಲ ಎಂದು ಪ್ರಶ್ನಿಸಿ ಪ್ರಯತ್ನಿಸಿ ಸಫಲ ಳಾದಳು. ಬಯಲಾಗುವುದೆನ್ನಿ ಇಂಥ ಶಕ್ತಿಯುತ ಸಾಧನೆ ಭಾರತದಲ್ಲಿ ಸಂಭವಿಸಿದೆ. ಅವಳು ಮಹಾಚೇತನ ಶಕ್ತಿ, ಬಹುದೊಡ್ಡ ಜ್ಞಾನಿ, ಕವಿಯತ್ರಿ ಆಗಿದ್ದಳು. ವಿವಸ್ತ್ರಳಾಗಿ ಧರ್ಮ ಪ್ರಚಾರ ಮಾಡಿದಳು.' ಲೋಹಿಯಾರಿಗೆ ಬಸವಣ್ಣ ನವರ ಪರಿಚಯವೂ ಇದ್ದಿರಬಹುದು.

ಲೋಹಿಯಾ ಪ್ರಕಾರ ದೀರ್ಘಾವಧಿಯ ರಾಜಕೀಯವೇ ಧರ್ಮ. ಅಲ್ಪಾವಧಿಯ ಧರ್ಮವೇ ರಾಜಕೀಯ. ಬಸವಣ್ಣನವರು ಧರ್ಮಕ್ಕೆ ಒತ್ತು ಕೊಟ್ಟರೆ ಲೋಹಿಯಾರವರು ರಾಜಕೀಯಕ್ಕೆ ಒತ್ತು ಕೊಟ್ಟಿದ್ದರು. ದೇಶಕಾಲಾತೀತವಾದ ಶರಣರ ತತ್ತ್ವಗಳನ್ನು ಲೋಹಿಯಾರ ಚಿಂತನೆಗಳನ್ನು ಇನ್ನೂ ಸಮರ್ಥವಾಗಿ ಅಧ್ಯಯನ ಮಾಡಿ ಅನ್ವಯಿಸುವ ಪ್ರಯತ್ನ ಭಾವೀ ಜನಾಂಗಕ್ಕೆ ಅವಶ್ಯವಾಗಿದೆ.

❑





# ಶಾಕ್ತ ಸಂಪ್ರದಾಯ ಮತ್ತು ಅಲ್ಲಮಪ್ರಭು

(ಮುಂದುವರಿದ ಭಾಗ)

– ಪ್ರೊ. ಕೆ.ಜಿ. ನಾಗರಾಜಪ್ಪ *

ಸಾಧಕನ ತೀವ್ರ ಸಾಧನೆಯಿಂದ ಮಾತ್ರ, ತನ್ನಲ್ಲಿನ ಲಿಂಗದ ಅರಿವು ಸಾಧ್ಯವಾಗುವುದು.

ಅಲ್ಲಮನ ಅನೇಕ ವಚನಗಳಲ್ಲಿ ನಾದ ಮತ್ತು ಬಿಂದುವಿನ ಪ್ರಸ್ತಾಪವಿದೆ. ನಾದ–ಬಿಂದುವಿನ ವಿಷಯಗಳೇ ತಂತ್ರ, ನಾದ ಮತ್ತು ಬಿಂದುವಿನೊಂದಿಗೆ ಬೀಜದ ಪ್ರಸ್ತಾಪವಿದೆ. ಬಿಂದು, ಬೀಜ ಮತ್ತು ನಾದ ಶಕ್ತಿಯೂ ಪ್ರಾಥಮಿಕ ವ್ಯಕ್ತ ಪ್ರಪಂಚ. ಬಿಂದು ಶಿವಪ್ರಧಾನ, ಬೀಜ ಶಕ್ತಿಪ್ರಧಾನ. ನಾದ ಶಿವ–ಶಕ್ತಿ ಎರಡೂ ಸಮಾನ. ಬಿಂದು, ಬೀಜ ಮತ್ತು ನಾದವನ್ನು ತ್ರಿಕೋಣ ಎನ್ನಲಾಗಿದೆ. ತ್ರಿಕೋಣವೇ ಕುಂಡಲಿನಿ, ಶಕ್ತಿ ಮಾಯೆ ಮತ್ತು ಮಹಾ ಮಾಯೆ. ಮಾಯೆ ಅಶುದ್ಧ. ಮಹಾಮಾಯೆ ಶುದ್ಧ. ಶಕ್ತಿ ಶಿವನ ಚೈತನ್ಯ ಸ್ವರೂಪ. ಶಕ್ತಿಯೇ ಜಗತ್ತಿನ ಸೃಷ್ಟಿಗೆ ಉಪಾದಾನ ಕಾರಣ. ಮಾಯೆ ಅಧೋಮುಖ. ಕುಂಡಲಿನಿ ಊರ್ಧ್ವ ಮುಖ. ನಾದ ಜ್ಞಾನಶಕ್ತಿ, ಬಿಂದು ಕ್ರಿಯಾಶಕ್ತಿ. ಮಾಯೆ ನಿತ್ಯ ಜೀವನದ ವ್ಯವಹಾರ. ಲೋಕವೇ ಮಾಯೆ.

*ತ್ರಿಭುವನ ಪಂಜರದೊಳಗೆ, ಸಂಸಾರ ಚಕ್ರದಲ್ಲಿ ಹೊನ್ನು ಪ್ರಾಣವೇ ಪ್ರಾಣವಾಗಿ ಹೆಣ್ಣು ಪ್ರಾಣವೇ ಪ್ರಾಣವಾಗಿ, ಮಣ್ಣು ಪ್ರಾಣವೇ ಪ್ರಾಣವಾಗಿ, ಈ ಸುಖದ ಸೊಕ್ಕಿನಲ್ಲಿ ಈಸಿಯಾಡು ತಿರ್ದರೆಲ್ಲಾ ಬಹು ವಿಧದ ವ್ಯವಹಾರ ವೇಧಿಸಿದವರು ಗುಹೇಶ್ವರ*

ಅ.ವ.ಚಂ. ವ. ೧೧೮೩, ಪು. ೨೬೦

ಮಾಯೆ ಮತ್ತು ಮಹಾಮಾಯೆಯ ಮೂಲ ಒಂದೇ. ಮೊದಲು ಒಂದೇ ಇತ್ತು. ಆನಂತರ ಎರಡಾಯಿತು. ಮತ್ತೆ ಎರಡು ಒಂದಾಗುವುದೇ ಅದರ ಗುರಿ.

*ಒಂದೆರಡಾದುದನಾರೂ ಅರಿಯರು. ಆ ಒಂದು ಒಂದೆಯಾಯಿತ್ತು. ತ್ರಿತತ್ವವಾಯಿತ್ತು. ವೇದಾತೀತವಾಯಿತ್ತು. ಭರತವಾಯಿತ್ತು, ಪ್ರಾದೇಶಿಕವಾಯಿತ್ತು, ಭಕ್ತಿಗೆ ಸಾಧ್ಯವಾಯಿತ್ತು, ಅದಕ್ಕೆ ಆಧಾರ ದೇಹವಾಯಿತ್ತು. ಅದು ಅಷ್ಟವಿಗ್ರಹ ಸ್ವರೂಪವಾಗಿರುತ್ತಿಪ್ಪುದು. ಮತ್ತಿದ್ದ ಒಂದು ಮಾಯಾ ಶಕ್ತಿಯಂ ಕೂಡಿ, ಗುಣತ್ರಯಂಗಳಂ ಕೂಡಿ, ನಾನಾತ್ಮವೆನಿಸಿಕೊಂಡು, ಪ್ರಾಣದಿ ವಾಯುಗಳಂ ಕೂಡಿಕೊಂಡು, ಜಡ ಪ್ರಕೃತಿಗಳಂ ಹೊತ್ತುಕೊಂಡು, ಸಂಕಲ್ಪ ವಿಕಲ್ಪವೆಂಬ ಉಭಯಕಾರ್ಯಗಳಂ ಕಲ್ಪಿಸಿ, ನಾನಾ ಯೋನಿ ಪ್ರಾಪ್ತನಾಗುತ್ತಿರ್ದು, ಲೋಕಾದಿ ಲೋಕಂಗಳಂ ಬಯಸಿ ನಾನಾ ಪಥದಿಂದ ಅರಸಿ ಹರಿವುತ್ತಿಪ್ಪರಖಿಳ ಜೀವಗಳೆಲ್ಲರು......*

ಅ.ವ.ಚಂ. ವ. ೭೪೪, ಪು. ೧೬೪

ಒಂದರಲ್ಲಿ ಎರಡಾದುದರ ಮೊದಲನೆಯದು ಗುರು, ಲಿಂಗ, ಜಂಗಮವಾಯಿತು. ಎರಡನೆಯದು ಹೆಣ್ಣು, ಹೊನ್ನು, ಮಣ್ಣು ಎಂದಾಯಿತು. ಮೊದಲಯದೇ ಲಿಂಗತತ್ತ್ವ, ಎರಡನೆಯದು ಜೀವತತ್ತ್ವ– ಮತ್ತೆ ಎರಡು ಒಂದಾಗುವುದೇ ಲಿಂಗಾಂಗ ಸಾಮರಸ್ಯ ಸಾಧನೆ. ಇಂಥ ಒಂದು ದ್ವಂದ್ವಕ್ಕೆ ಸಿಕ್ಕಿರುವ ಅಲ್ಲಮನ ವ್ಯಕ್ತಿತ್ವ, ದ್ವಂದ್ವ ಮೀರಿ, ಅದ್ವೈತದ ಸಹಜ ಸಾಧನೆಯ ಸಾರ್ಥಕ ಜೀವನವೇ ಅಲ್ಲಮನದು.

ಉಸಿರು, ಮನಸ್ಸು ಮತ್ತು ವೀರ್ಯ–ಮೂರೂ ಧಾರ್ಮಿಕ ಬದುಕಿಗೆ ಸವಾಲುಗಳು. ಅವುಗಳ ನಿಯಂತ್ರಣ ಅಥವಾ ಅನಿಯಂತ್ರಣದ ಬದುಕೇ ಜಿತೇಂದ್ರಿಯ ಸಾಧಿಸುವ ಋಷಿ ಜೀವನ, ಇಂದ್ರಿಯ ತೃಪ್ತಿಯ ತಾಂತ್ರಿಕ ಸಾಧನೆ ಎಂದಾಗಿದೆ. ನಿಯಂತ್ರಣದ್ದು ಊರ್ಧ್ವಮುಖ ಸಾಧನೆಯಾದರೆ, ಎರಡನೆಯದು ಅಧೋಮುಖ ಸಾಧನೆ. ಒಂದನೆಯದು ಊರ್ಧ್ವವಕ್ತ್ರ, ಎರಡನೆಯದೇ ಅಧೋ ವಕ್ತ್ರ. ಮೊದಲನೆಯದಕ್ಕೆ ಬಾಯಿ

* ೭೩, ಅಪೂರ್ವ, ೫ನೇ ಮುಖ್ಯರಸ್ತೆ, ಮಾರುತಿ ಹೆಚ್.ಬಿ.ಸಿ.ಎಸ್. ಬಡಾವಣೆ, ಗುರಪ್ಪನಪಾಳ್ಯ, ಬಿ.ಟಿ.ಎಂ. ೧ನೇಹಂತ, ಬೆಂಗಳೂರು.

ಭಗವಾದರೆ, ಎರಡನೆಯದಕ್ಕೆ ಯೋನಿಯೇ ಮುಖವಾಗುತ್ತದೆ. ಎರಡರಲ್ಲಿಯೂ ಮುಕ್ತಿ ಸಾಧನೆಯ ಗುರಿ. ಅಲ್ಲಮ ತನ್ನ ಸಾಧನೆಗೆ ತಂತ್ರ ಮಾರ್ಗವನ್ನೇ ಬಳಸಿದರೂ, ಅವನು ಲಿಂಗ ಲಿಂಗ ಕೂಡುವುದನ್ನು, ವ್ಯೋಮ ವ್ಯೋಮ ಕೂಡುವುದನ್ನು ಒಲಿಯುತ್ತಾನೆ. ಅಂದರೆ ಕೌಲಾಚಾರದಲ್ಲಿ ಸಮಯ ಮಾರ್ಗಸಾಧಕನಾಗಿ, ದಕ್ಷಿಣಾಚಾರಕ್ಕೆ ಒಲಿದಂತೆ ತೋರುತ್ತದೆ. ಆದರೆ ಅವನ ಸಹಜ ಸಾಧನೆ ಇವೆಲ್ಲವನ್ನೂ ಮೀರಿದಂತೆ ಕಂಡುಬರುತ್ತದೆ. ಕಾಮ ವನ್ನೂ ಲಿಂಗಕ್ಕೆ ಅರ್ಪಿಸುವ ಮಾತನಾಡುತ್ತಾನೆ. ಅಲ್ಲದೆ ಲಿಂಗಶಕ್ತಿಯೊಳಗು ಎಂದೂ ಹೇಳುತ್ತಾನೆ.

*ಶರೀರವುಳ್ಳನ್ನಕ್ಕ ನೆಳಲಿಲ್ಲದಿರಬಾರದು, ಭೂಮಿಯುಳ್ಳನ್ನಕ್ಕ*
*ಆಕಾಶವಿಲ್ಲದಿರಬಾರದು. ನಾನುಳ್ಳನ್ನಕ್ಕ ನೀನಿಲ್ಲದಿರಬಾರದು: ಗುಹೇಶ್ವರ*
*ಲಿಂಗವು ಶಕ್ತಿಗೋಳಗಾಗಿತ್ತು. ಬಟ್ಟಬರಿಯ ಬಯಲೆಂಬುದಕ್ಕೆ ಉಪಮಾನವಿಲ್ಲ.*

ಅ.ವ.ಚಂ. ವ. ೧೧೮೨, ಪು. ೨೬೦

ಅಲ್ಲಮ ಹೆಣ್ಣು, ಮಣ್ಣು ಮತ್ತು ಹೊನ್ನನ್ನು ಮಾಯೆ ಎನ್ನುವುದಿಲ್ಲ. ಮನದ ಮುಂದಣ ಆಸೆಯೆ ಮಾಯೆ ಎನುತ್ತಾನೆ. ಅನಿತ್ಯವನ್ನು ನಿತ್ಯಕ್ಕೆ ಸಮರ್ಪಿಸಿ ಲಿಂಗಾಂಗ ಸಾಮರಸ್ಯ ಸಾಧಿಸಬಹುದೆ ಎಂದು ಪ್ರಶ್ನಿಸಿದ ಅಲ್ಲಮನೇ 'ಎನ್ನಂಗದಾಹಾರ ಸ್ತ್ರೀಯನು ಜಂಗಮಕ್ಕೆ ಸಂಯೋಗ ಮಾಡಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ....' ಹೀಗೆ ಹದಿನಾರು ತರದ ಭಕ್ತಿಯನ್ನು ವಂಚನೆ ಇಲ್ಲದೆ ಅರ್ಪಿಸುವುದಾಗಿ ಹೇಳುತ್ತಾನೆ. ಲಿಂಗಪತಿ, ಶರಣ ಸತಿ ತತ್ತ್ವ ಇದರಲ್ಲಿ ಅಡಗಿದೆ ಎಂದರೂ, ಶಿವ ಭಕ್ತಿ ಸಂಬಂಧವೇ ದೇಹ ದೇಹಿ ಸಂಬಂಧ ಎಂದು ಹೇಳಿ, ಮತ್ತೊಂದು ಕಡೆ

*ಸತಿಭಕ್ತೆಯಾದಡೆ ಹೊಲೆಗಂಜಲಾಗದು, ಪತಿ ಭಕ್ತನಾದಡೆ ಕುಲಕಂಜಲಾಗದು*
*ಸತಿಪತಿಯೆಂಬ ಅಂಗಸುಖ ಹಿಂಗಿ, ಲಿಂಗವೆ ಪತಿಯಾದ ಬಳಿಕ, ಸತಿಗೆ*
*ಪತಿಯುಂಟೆ, ಪತಿಗೆ ಸತಿಯುಂಟೆ? ಪಾಲುಂಡು ಮೇಲುಂಬರೆ ಗುಹೇಶ್ವರ.*

ಅ.ವ.ಚಂ.ವ : ೧೪೮. ಪು. ೨೫

ಲಿಂಗ ಪತಿ, ಶರಣ ಸತಿ ತತ್ವವನ್ನು ಅಂಬಿಗರ ಚೌಡಯ್ಯ ಮೋಸ ಎಂದು ಕರೆಯುತ್ತಾನೆ. ಆತ್ಮಕ್ಕೆ ಲಿಂಗ ಭೇದ ಇಲ್ಲ ಎನ್ನುವುದು ದೇವರ ದಾಸಿಮಯ್ಯನ ಮತ. ಹೆಣ್ಣಿನ ವಿಷಯವಾಗಿ ಅಲ್ಲಮ ವಿರೋಧ ನಿಲುವನ್ನು ಹೊಂದಿರುವುದು ಕಂಡು ಬಂದರೂ, 'ಹೆಣ್ಣು ಹೆಣ್ಣಲ್ಲ ಭಾವಿಸುವೊಡೆ ಸಾಕ್ಷಾತ್ ಕಪಿಲ ಸಿದ್ಧಮಲ್ಲಿಕಾರ್ಜುನ' ಎಂಬ ಸಿದ್ಧರಾಮನ ಮತವನ್ನೇ ಒಪ್ಪಿರುವಂತೆ ಕಂಡು ಬರುತ್ತದೆ. ಇದರಿಂದ ಹೆಣ್ಣು ಸದಾ ಲೋಕ ಅಥವಾ ಆಧ್ಯಾತ್ಮಿಕ ಜೀವನದಲ್ಲಿಯಾದರೂ ಗಂಡಿಗೆ ಅಧೀನ ಎಂಬ ಸಿದ್ಧಾಂತವನ್ನೇ ಅಲ್ಲಮ ಎತ್ತಿ ಹಿಡಿದಂತಾಗುತ್ತದೆ. ಆತ್ಮವನ್ನು ಲಿಂಗಭೇದ ಎಂದರೂ, ಪರಮಾತ್ಮ ಮಾತ್ರ ಗಂಡು ಎಂದಾಗುತ್ತದೆ. ತಂತ್ರ ಶಕ್ತಿ ಪ್ರಧಾನವಾದರೂ ಪುರುಷನೇ ಪ್ರಧಾನ, ಹೆಣ್ಣು ಅಧೀನಳು ಎಂಬ ವೈದಿಕ ಪಿತೃಪ್ರಧಾನ ತತ್ವವನ್ನೇ ತಂತ್ರಸಾಧನೆಯಲ್ಲಿ ಬಳಸಿರುವುದು ಕಂಡು ಬರುತ್ತದೆ. ಭಕ್ತಿ ಪಂಥವೇ ಹೆಣ್ಣಿನ ಭಾವದ್ದು. ಆದರೆ ಭಕ್ತಿಯಲ್ಲಿ ಗಂಡೂ ಸತಿ ಭಾವದಿಂಡ ವಿರಹ ಅನುಭವಿ ಸುವುದು ಅಸಹಜ ಎಂದೇ ತಿಳಿಯಬೇಕು. ಅನುಭಾವದಲ್ಲಿ ಕೂಟ ಸಾಧನೆ ಸಹಜ. ಅದು ಹೆಣ್ಣು-ಗಂಡಿನ ಕೂಟ ವಾಗಿರಬಹುದು ಅಥವಾ ಜೀವಾತ್ಮ ಮತ್ತು ಪರಮಾತ್ಮರ ಕೂಟವಾಗಿರಬಹುದು. ಅಲ್ಲಮ ಲೈಂಗಿಕ ಕ್ರಿಯೆಯನ್ನು ಶರಣ ಸತಿ ಭಾವದಲ್ಲಿ ಸಾಂಕೇತಿಕವಾಗಿ ಹೇಳಿರುವುದು ಕಂಡುಬರುತ್ತದೆ. ಪ್ರಾಣ ನಿಮ್ಮ ರತಿಸುಖಕ್ಕೆ ಸಂದುದು, ಸಂಗ ಸಂಗ ಯೋಗವಿಲ್ಲದೆ, ರತಿ ಸುಖವನರಸಲುಂಟೆ? ಬಿಂದು ಶಕ್ತಿಯ ಭೇದ ಸಂದಯೋಗವ ಸುಖವ ತಂದು ಮೂರ್ತಿಗೊಳಿಸಿದವರಾರು? ಎನ್ನುವಾಗ ಅಲ್ಲಮನ ವಚನಗಳಲ್ಲಿ ಬರುವ ಕೂಟ ಸಾಧನೆಯ ಸಂಕೇತಿತಾರ್ಥ ಸ್ಪಷ್ಟವಾಗುತ್ತದೆ.

*ಶಿವ-ಶಕ್ತಿ ಸಂಪುಟದೆಂಬುದೆಂತು ಹೇಳಿರಣ್ಣ? ಶಿವನೇ ಚೈತನ್ಯಾತ್ಮಕನು,*
*ಶಕ್ತಿಯೇ ಚಿತ್ತು, ಇಂತು ಚೈತನ್ಯಾತಾತ್ಮಕನೇ ಚಿತ್ಸ್ವರೂಪನೆಂದರಿಯಬಲ್ಲಡೆ*
*ಆತನೆ ಶರಣ ಗುಹೇಶ್ವರ.*

ಅ.ವ.ಚಂ. ವ. ೫೮೯.ಪು.೧೨೯

ಶಿವನ ಚೈತನ್ಯಾತ್ಮಕ ಚಿತ್ಸ್ವರೂಪವೇ ಶಕ್ತಿ, ಶಿವಪ್ರಕಾಶ, ಶಕ್ತಿ ವಿಮರ್ಶಕಳು. ಶಕ್ತಿ ಸ್ವತಂತ್ರಳಲ್ಲ.





ಶಿವನಿಂದಲೇ ಶಕ್ತಿ ಕ್ರಿಯಾತ್ಮಕಳಾಗುವುದು. ಅಲ್ಲದೆ ಊರ್ಧ್ವಮುಖಿಯಾದ ಕ್ರಿಯಾತ್ಮಕ ಶಕ್ತಿ, ಕೂಟ ಸಾಧಿಸುವುದು, ಸಹಸ್ರಾರುವಿನಲ್ಲಿ ಸ್ಥಾಯಿಯಾಗಿ ನೆಲೆಗೊಂಡಿರುವ ಶಿವನೊಂದಿಗೆ(ಲಿಂಗ) ಅದೂ ಅಲ್ಲಿ ಶಕ್ತಿ ಶಾಶ್ವತವಾಗಿ ನೆಲೆಗೊಳ್ಳುವಂತಿಲ್ಲ, ತನ್ನ ಮೂಲಕ್ಕೆ ಮತ್ತೆ ಹಿಂದಿರುಗಬೇಕು. ಹೀಗಾಗಿ ಹೆಣ್ಣು ಗಂಡಿಗೆ ಅಧೀನ ಎಂಬುದು ಸ್ಪಷ್ಟವಾಗುತ್ತದೆ. ವೈದಿಕರು ಬ್ರಹ್ಮನ್ ಅಥವಾ ಶೈವ ಅಥವಾ ವೀರಶೈವರ ಲಿಂಗ ಅಥವಾ ಶಿವನಾದರೂ ಒಂದೇ. ಅದು ಗಂಡೇ. ಹೆಣ್ಣು ಗಂಡಿಗೆ ಅಧೀನವೇ. ಶಾಕ್ತ ಮಾತ್ರ ಪುರುಷ ಹೆಣ್ಣಿಗೆ ಅಧೀನ ಎಂಬ ತತ್ತ್ವವನ್ನು ಎತ್ತಿ ಹಿಡಿಯುತ್ತದೆ. ಶಿವ-ಶಕ್ತಿಯರು ಸಮಾನ ಎನ್ನುವುದು ಪ್ರಚಾರದ ಹುಸಿ ಸಿದ್ಧಾಂತ. ಅಲ್ಲಮ ಸತಿಯಾಗಿ ಬಯಸುವುದು 'ನಿನ್ನ ಮನದ ಕೊನೆಯ ಮೊನೆಯ ಮೇಲೆ ಅಂಗವಿಲ್ಲದ ರೂಪನ ಕಂಡು ಮರುಳಾದೆನವ್ವ'. ಅಲ್ಲಮನ ಭಕ್ತಿ ನಿರ್ಗುಣ ಭಕ್ತಿ. ಅವನು ಲೋಕದ ಹಂಗನ್ನು ಕಳಚಿಕೊಂಡವನು.

*ರಸದ ಬಾವಿಯ ತುಡುಕಬಾರದು. ಕತ್ತರಿವಾಣಿಯ*
*ದಾಂಟಿದವಂಗಲ್ಲದೆ ಪರುಷವಿದೆ ಕಬ್ಬುನವಿದೆ ಸಾಧಿಸಬಲ್ಲವಂಗೆ*
*ಶ್ರೀಶೈಲದುದಕವ ಧರಿಸಲು ಬಾರದು ಗುಹೇಶ್ವರ ನಿಮ್ಮ*
*ಶರಣಂಗಲ್ಲದೆ.*

ಅ.ವ.ಚಂ.ವ : ೨೨೮. ಪು.೫೩

ಶ್ರೀ ಶೈಲ ಒಂದು ಶಾಕ್ತ ಪೀಠ. ಅದು ಮಾತಂಗಿ ಪೀಠ. ಮಾತಂಗಿ ದಶಭಕ್ತಿಗಳಲ್ಲಿ ಒಬ್ಬಳು. ಅಂದರೆ ಶ್ರೀಶೈಲದುದರ ಸಾಧನೆ ಶರಣಂಗಲ್ಲದೆ ಸಾಧ್ಯವಾಗದು. ಶರಣನೇ ಆ ಶಕ್ತಿ ಸಾಧನೆಗೆ ಸಮರ್ಥ ಎಂದಂತಾಗುತ್ತದೆ. ಅಲ್ಲದೆ, ಅಹೋರಾತ್ರಿ ಅಷ್ಟಭೋಗಂಗಳ ಲಿಂಗಕ್ಕೆ ಕೊಟ್ಟುಕೊಳಬೇಕು ಎಂಬ ಮಾತಾಗಲಿ :

*ಪಂಚೇಂದ್ರಿಯ ಸಪ್ತಧಾತುವನತಿಗಳೆದಲ್ಲಿ ಫಲವೇನೋ? ಕಾಮ*
*ಕ್ರೋಧ ಮೋಹ ಮದ ಮತ್ಸರ ವಿಷಯವನತಿ ಗಳೆದಲ್ಲಿ*
*ಫಲವೇನೋ?ಇವೆಲ್ಲವ ಕೊಂದ ಪಾಪ ನಿಮ್ಮ ತಾಗುವುದು*
*ಗುಹೇಶ್ವರ.*

ಅ.ವ.ಚಂ.ವ : ೧೫೨. ಪು.೩೫

ಇಂಥ ಅಲ್ಲಮನ ವಿರುದ್ಧದ ಹೇಳಿಕೆಗಳಿಂದ ಗೊಂದಲವುಂಟಾಗುತ್ತದೆ. ಗಂಡು ಹೆಣ್ಣಿನ ವಿರಹಕ್ಕೂ, ಭಕ್ತ-ಭಗವಂತರ ವಿರಹಕ್ಕೂ ಲಕ್ಷ್ಮಣಗೆರೆ ಯಾವುದು? ದೇಹ ಅಳಿಯುವ ಪೂರ್ವಸ್ಥಿತಿಗೂ, ದೇಹ ಅಳಿದ ಉತ್ತರ ಸ್ಥಿತಿಗೂ ಹೆಣ್ಣಿನ ಬಗ್ಗೆ ವ್ಯತ್ಯಾಸವೇನು ಅಂದರೆ ಅಲ್ಲಮ ಅಂತರಂಗದಲ್ಲಿ ಶಾಕ್ತ ಬಹಿರಂಗದಲ್ಲಿ ಶೈವ ಎಂದು ತಿಳಿಯಬೇಕೆ? ಆದರೆ ಅವನ ಸಾಧನೆಯಂತೂ ಶಾಕ್ತವೇ. ಅದಕ್ಕೆ ಅಲ್ಲಮನನ್ನು ಪ್ರಚ್ಛನ್ನ ಶಾಕ್ತ ಎಂದಿರುವುದು. ಅಲ್ಲದೆ ಸಹಜ ಸಾಧನೆ, ಶಾಕ್ತ ಸಾಧನೆಯ ಹೆಣ್ಣನ್ನೇನೂ ನಿಷೇಧಿಸುವುದಿಲ್ಲ.

ತಂತ್ರ ಮತ್ತು ಯೋಗ ಎರಡೂ ಜೊತೆ ಜೊತೆಯಾದವು. ತಂತ್ರದಲ್ಲಿ ಬಳಸುವ ಯೋಗ ಪತಂಜಲಿಯ ಯೋಗಕ್ಕಿಂತ ಭಿನ್ನವಾದುದು. ಕುಂಡಲಿಯ ಜಾಗೃತಿ ಮತ್ತು ಚಲನೆಗೆ ಯೋಗ ಸಾಧನೆ ಅನಿವಾರ್ಯವಾದುದು. ಅಲ್ಲದೆ ಅಲ್ಲಮ, *'ಎರಡು ಯೋಗವುಂಟು ಅಲ್ಲಿ, ಅಳಿದು ಕೂಡುವುದೊಂದು ಯೋಗ, ಅಳಿಯದೇ ಕೂಡುವುದೊಂದು ಯೋಗ. ಈ ಎರಡು ಯೋಗದೊಳಗೆ ಅಳಿಯದೆ ಕೂಡುವವರಿದು ಕಾಣಾ ಗುಹೇಶ್ವರ.'* ಹುಟ್ಟು-ಸಾವು-ಸಾಧನೆಯಲ್ಲಿ ವಿವಿಧ ಹಂತಗಳಲ್ಲಿ ಗುರಿ ಮುಟ್ಟುವ ತನಕ ನಡೆಯುವ ನಿರಂತರ ಕ್ರಿಯೆ. ಯೋಗದಲ್ಲಿ ಶಿವಯೋಗವನ್ನು ಅಲ್ಲಮ ಒಪ್ಪುತ್ತಾನೆ. ಆದರೆ ಅದನ್ನು ಅಷ್ಟಾಗಿ ವಿವರಿಸಿ ಸ್ಪಷ್ಟಪಡಿಸುವುದಿಲ್ಲ. 'Inner field force is Tantra, yoking of field is yoga' ಎಂಬ ಮಾತಿದೆ. ತಂತ್ರ ಸಾಧನೆಗೆ ಯೋಗ ಅನಿವಾರ್ಯ. ಶಾಕ್ತಕ್ಕೆ ಶೈವದ ವ್ಯಾಖ್ಯಾನವೇ ಶಿವಯೋಗವೇ ಎಂಬುದನ್ನು ಪರಿಶೀಲಿಸಬೇಕು.

ಅಲ್ಲಮ ಯೋಗದ ಬಗ್ಗೆಯೂ ವಿರುದ್ಧವಾಗಿಯೇ ಮಾತನಾಡುತ್ತಾನೆ.

*ಕಾಮನ ಸುಟ್ಟು ಹೋಮವನುರುಹಿ ತ್ರಿಪುರ ಸಂಹಾರದ ಕೀಲ*
*ಬಲ್ಲಡೆ ಯೋಗಿಯಾದಡೇನು? ಭೋಗಿಯಾದ ಡೇನು?*
*ಶೈವನಾದಡೇನು? ಸಂನ್ಯಾಸಿಯಾದಡೇನು? ಆಶನವ ತೊರೆದಾತ.*

*ವೃಷನವ ಮರೆದಾತ? ಗುಹೇಶ್ವರ*
*ಲಿಂಗದಲ್ಲಿ ಆವರ ಹಿರಿಯರೆಂಬೆನು?*

ಅ.ವ.ಚಂ.ವ : ಪು. ೭೫

ಸದಾ ನಿರ್ಗುಣ ಸ್ಥಾನದಲ್ಲಿ ನಿಂತು, ಲೋಕದ ಹಂಗು ಹರಿದುಕೊಂಡು ಮಾತನಾಡುವ ಅಲ್ಲಮನ ಸಾಧನೆಯ ಹೆಜ್ಜೆಗಳು, ನೀರ ಮೇಲೆ ನಡೆಯುವ ಹೆಜ್ಜೆಗಳೇ ಸರಿ. ಅವನ ನಿಲುವುದು ಜ್ಞಾನಿಯಾದವನು, ಯಾರನ್ನಾದರೂ. ಲೋಕಕಲ್ಯಾಣಕ್ಕಾಗಿ ಕೊಲ್ಲಬಹುದು ಎಂಬ ಭಗವದ್ಗೀತೆಯದಕ್ಕಿಂತ ಭಿನ್ನವಲ್ಲ. ಅಳಿವು, ನುಂಗು, ನಷ್ಟ-ಪದಗಳನ್ನು ಲೀಲಾಜಾಲವಾಗಿ ಬಳಸುತ್ತಾನೆ. ಬಿಂದು ನಾದವನುಂಗಿ ಕಂಡಿಕೆ ಲಾಳಿಯನುಂಗಿ, ಚಿಕ್ಕಾಡು ಆನೆಯ ನುಂಗಿ, ದೇಹಗುಣ ಅಳಿದು, ಪ್ರಾಣಗುಣ ಅಳಿದು, ಭಾವಗುಣ ಅಳಿದು, ಜ್ಞಾನನಷ್ಟ ಮುಂತಾದವು. ಅಲ್ಲಮನದು ಕಾಲಿಲ್ಲದ ಗಮನದ ಸಾಧನೆ. ಅವನದು ಶಬ್ದ ಬ್ರಹ್ಮವೇ ಹೊರತು, ಅರ್ಥ ಬ್ರಹ್ಮವಲ್ಲ. ಅದಕ್ಕೇ ಅವನು ಅತಿಯಾಗಿ ಬೆಡಗಿನ ವಚನವನ್ನು ಬಹಿರಂಗ ಮತ್ತು ಅಂತರಂಗದ ಸಾಧನೆಯ ಅನುಭವದ ಅಭಿವ್ಯಕ್ತಿಗೆ ಬಳಸಿರುವುದು. ಅದಕ್ಕಾಗಿ ಅವನು ಪ್ರಾಣಿಗಳು, ಪಕ್ಷಿಗಳು, ವೃಕ್ಷಗಳು, ಮಾನವ ಸಂಬಂಧಗಳನ್ನು ಸಾಂಕೇತಿಕವಾಗಿ ಬಳಸಿದ್ದಾನೆ. ಆರು ಪಿಂಡ, ಬ್ರಹ್ಮಾಂಡ, ಸಾಧನೆಯ ವಿವಿಧ ಹಂತಗಳನ್ನು ಬೆಡಗಿನ ವಚನಗಳು ಸೂಚಿಸುತ್ತವೆ. ಅಲ್ಲಮ ಭೋಗಿಯಾದರೂ ಭೋಗಿಯಲ್ಲ, ಮುಕ್ತ ನಾದರೂ ಮುಕ್ತನಲ್ಲ. ಅವನಿಗೆ ಶಿವಪಥ ಅರಿಯುವ ಪೂರ್ವ, ಅರಿತ ಅನಂತರದ ಸ್ಥಿತಿಯನ್ನು ಸ್ಪಷ್ಟವಾಗ ಬೇಕಿದೆ. ಅವನು ಸರಳವಾಗಿ ವಿರೋಧದ ಹೇಳಿಕೆಗಳನ್ನು ಅದ್ವೈತದ ಅತೀತದಲ್ಲಿ ಬಗೆಹರಿಸಿ ಬಿಡುತ್ತಾನೆ. ಅಲ್ಲಮನದು ಒಂದು ರೀತಿಯ ಅನುಭಾವದ ಕಣ್ಕಟ್ಟಿನ ವ್ಯವಹಾರ. ಓದುಗರನ್ನು ಬೆದರಿಸಿ, ಬೆಚ್ಚಿಸಿ, ಸಮ್ಮೋಹಗೊಳಿಸುತ್ತಾನೆ. ಅಲ್ಲಮ ಆಧ್ಯಾತ್ಮಿಕ ಚಿಂತಕನೇ ಹೊರತು, ಸಮಾಜ ಚಿಂತಕನಲ್ಲ. ಅವನದು ವ್ಯಕ್ತಿನಿಷ್ಠೆ ಮತ್ತು ಪ್ರಜ್ಞೆಯೇ ಹೊರತು, ಸಮುದಾಯ ಪ್ರಜ್ಞೆಯಲ್ಲ.

*– ಮುಂದುವರೆಯುತ್ತದೆ.*

## ಶ್ರೀವಾಣಿ

ವೀರಶೈವ ಧರ್ಮದಲ್ಲಿರುವ ಒಳಪಂಗಡಗಳನ್ನು ನಿರ್ಮೂಲನೆ ಮಾಡಿ ಸಮಾಜದ ಸಂಘಟನೆಯನ್ನು ಬಲಪಡಿಸುವ ನಿಟ್ಟಿನಲ್ಲಿ ಯುವಕರು ಮುಂದಾಗಬೇಕು. ಒಳಪಂಗಡಗಳ ಹೆಸರಿನಲ್ಲಿ ಸಮಾಜವನ್ನು ಛಿದ್ರಗೊಳಿಸುವ ಪ್ರವೃತ್ತಿಯನ್ನು ಸಮಾಜ ಬಾಂಧವರು ಮತ್ತು ಎಲ್ಲಾ ಮಠಾಧೀಶರು ಒಕ್ಕೊರಲಿನಿಂದ ಖಂಡಿಸಬೇಕು. ಹಲವಾರು ಕಾರಣಗಳಿಂದ ಇಂದು ವೀರಶೈವ ಸಮಾಜ ಛಿದ್ರವಾಗಿದ್ದು ಈ ಸಮಾಜದ ಒಗ್ಗಟ್ಟಿಗೆ, ಒಗ್ಗೂಡು ವಿಕೆಗೆ ಯುವಜನರು ತತ್ವಪ್ರೇಮಿಗಳಾಗಿ ಒಳಪಂಗಡ ಗಳ ನಿರ್ಮೂಲನೆಯ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕು.

❋ ❋ ❋

ವಿದ್ಯಾರ್ಥಿಗಳು ಕೆಟ್ಟರೆ, ತಪ್ಪು ಹಾದಿ ಹಿಡಿದರೆ ತಂದೆ ತಾಯಂದಿರು ಬೆವರು ಸುರಿಸಿ ದುಡಿದ ಹಣದ ವ್ಯಯ, ಜೊತೆಗೆ ಅಮೂಲ್ಯವಾದ ಕಾಲದ ವ್ಯಯವಾಗು ತ್ತಿದೆ. ಇದರಿಂದ ನಿಮ್ಮ ಬದುಕು ಹಾಳಾಗುವುದಲ್ಲದೆ ವ್ಯಕ್ತಿ, ಸಂಸ್ಥೆ, ಸರ್ಕಾರ ನಿಮ್ಮಿಂದಾಗಿ ಆರ್ಥಿಕ, ಆಹಾರ, ನಿರುದ್ಯೋಗ ಮತ್ತಿತರ ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ. ಈ ವಿಚಾರವನ್ನು ಗಂಭೀರವಾಗಿ ಯೋಚಿಸಿ ಮುನ್ನಡೆಯಬೇಕು. ಆದರೆ ಅದರ ದುಷ್ಪರಿಣಾಮ ಅತ್ಯಂತ ದೊಡ್ಡದು. ದೊಡ್ಡ ಸೇತುವೆಯಲ್ಲಿ ಕಲ್ಲೊಂದನ್ನ ಕಿತ್ತಾಗ ಉಂಟಾಗುವ ನಾಶದಷ್ಟೇ ಮಹತ್ವದ್ದು.

❋ ❋ ❋

ವಿದ್ಯಾರ್ಥಿಗಳು ಬೆಳಿಗ್ಗೆ ಎದ್ದರೆ ಮುಷ್ಕರ ಹೂಡಿ ಕಿಟಕಿ ಮುರಿದು. ಗಾಜನ್ನೊಡೆದು, ನಿತ್ಯದ ಸಾಮಾನ್ಯ ವ್ಯವಹಾರಕ್ಕೆ ಧಕ್ಕೆ ತಂದು ಸಾರ್ವಜನಿಕ ಆಸ್ತಿಪಾಸ್ತಿಗೆ 'ಜಖಂ' ಮಾಡುವುದು ನಾಗರಿಕತೆಯ ಲಕ್ಷಣವಲ್ಲ. ಅನಕ್ಷರತೆ, ಅಜ್ಞಾನ, ಮೂಢನಂಬಿಕೆ ಇವುಗಳ ವಿರುದ ಹೋರಟ ಮಾಡಿ ದೇಶದ ಭವಿಷ್ಯವನ್ನು ಉಜ್ವಲಗೊಳಿಸುವ ಕಾರ್ಯದಲ್ಲಿ ತೊಡಗಿದಾಗ ವಿದ್ಯಾರ್ಥಿ ಜೀವನಕ್ಕೆ ಬೆಲೆ ಬರುತ್ತದೆ.







# ತ್ರಿಕರಣ ಶುದ್ಧಿ – ಜೀವನಸಿದ್ಧಿ

– ತದ್ದಲಸೆ ವಿಘ್ನೇಶ್ವರ ಶರ್ಮ *

ನಾವು ಯಾವುದೇ ಕೆಲಸ ಮಾಡಬೇಕಾದರೂ ಅದಕ್ಕೆ ಸರಿಯಾದ ಸಾಧನ-ಸಲಕರಣೆಗಳು ಇರಬೇಕಾಗುತ್ತದೆ. ಆಗ ಅದರಿಂದ ಮನಃಪೂರ್ವಕ ಕಾರ್ಯ ನಿರ್ವಹಿಸಿದರೆ ಅದು ಸುಗಮವಾಗಿ ಸಿದ್ಧಿಸುತ್ತದೆ. ಇಲ್ಲದಿದ್ದರೆ ಕಾರ್ಯದಲ್ಲಿ ಯಶಸ್ಸು ತಂದುಕೊಳ್ಳುವುದು ಕಷ್ಟಸಾಧ್ಯ. ನಿರೀಕ್ಷಿತ ಫಲ ಸಿಗುವುದಿಲ್ಲ.

ನಮ್ಮ ಜೀವನಕ್ಕೂ ವಿಶಿಷ್ಟ ಪ್ರಭಾವ-ಪ್ರಸಿದ್ಧಿ ಬರಬೇಕೆಂದು ಎಲ್ಲರೂ ಬಯಸುತ್ತಾರೆ. ಸಿದ್ಧಿ ಬೇರೆ-ಪ್ರಸಿದ್ಧಿ ಬೇರೆ ಎಂಬುದೇನೂ ಇಲ್ಲ. ಸಿದ್ಧಿಯಾದರೆ ಪ್ರಸಿದ್ಧಿ ಬಂದೇ ಬರುತ್ತದೆ. ದೀಪ ಹಚ್ಚಿದರೆ ಬೆಳಕು. ಇಲ್ಲಿ ದೀಪ ಹಚ್ಚುವುದು ಸಿದ್ಧಿಯ ಸಂಕೇತ. ಅದೇ ಇಲ್ಲದೇ ಪ್ರಸಿದ್ಧಿ ಬಯಸುವುದು ಹೇಗೆ ಸಾಧ್ಯ. ಆದರೆ ಅನೇಕರಿಗೆ ಈ ಸಿದ್ಧಿಯ ಸಾಧನೆಯಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಳ್ಳುವುದು ಬೇಕಾಗಿರುವುದಿಲ್ಲ. ಗಿಡ ನೆಡದೇ – ನೆಟ್ಟರೂ ಪೋಷಣೆ ಮಾಡದೇ ಫಲ ಪಡೆಯುವ ಆಸೆ. ಇಂಥ ಆಸೆ ಹೇಗೆ ಫಲಪ್ರದವಾದೀತು?

ಜೀವನ ಸಿದ್ಧಿಗೂ ಅದರ ಸಾಧನೆಗೆ ಸಂಹಿತೆ ಇದೆ. ತ್ರಿಕರಣಶುದ್ಧಿ ಅದರ ಅಂತರಂಗ. ಈ ತ್ರಿಕರಣವೆಂದರೆ ಕಾಯಾ-ವಾಚಾ-ಮನಸ್ಸು. ಇವುಗಳ ಸಮನ್ವತೆಯೇ ಜೀವನಯೋಗ. ಯಾಗ, ಶರೀರ, ಮಾತು, ಮನಸ್ಸು. ಈ ತ್ರಿಕರಣಗಳ ಮಧುರ ಸಂಬಂಧ. ಕೂಡಿಕೊಂಡರೆ ಅದೇ ವಿಶಿಷ್ಟಯೋಗವೆನ್ನಿಸುತ್ತದೆ. ಕೇವಲ ಬಾಹ್ಯದ ಶುಚಿತ್ವ-ರುಚಿತ್ವ-ಪಾವಿತ್ರ್ಯ-ಚಾರಿತ್ರ್ಯಗಳಷ್ಟೇ ಅಲ್ಲದೆ ಇದಕ್ಕೆ ಕಾರಣವೆನ್ನಿಸಿದರೆ ಸಾಕಾಗದು. ಅದು ಅಂತರಂಗದ ಕೃಷಿ. ಇಂದ್ರಿಯಗಳ ಸಮನ್ವಯ ಯಾಗ. ಕಾಯಕ, ಮಾನಸಿಕ ಸಂಯಮ. ಸಂಸ್ಕಾರಗಳು ಬೆಳೆಯಬೇಕು. ಬಾಹ್ಯವಾಗಿ ನಾವು, ಪ್ರಾಮಾಣಿಕರೆನ್ನಿಸಬಹುದು. ಅಪರಾಧವನ್ನೂ ಮಾಡದಿರಬಹುದು. ಆದರೆ ಅದು ಅಷ್ಟಕ್ಕೇ ಸೀಮಿತವಲ್ಲವೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಅದು ನಮ್ಮ ಮನೋಭೂಮಿಯ ಮೇಲೆ ಮಾಡಿಕೊಂಡ ಧ್ಯಾನ-ಧಾರಣಗಳ ಮೇಲೆ ನಿರ್ಧಾರಿತವಾಗುತ್ತದೆ. ಪಾಪ-ಪುಣ್ಯಗಳಿಗೆ ಇವೇ ಪಾತಳಿ. ಬಾಹ್ಯದ್ದು ಪ್ರಸಿದ್ಧಿಯದು. ಅಂತರಂಗದ್ದು ಸಿದ್ಧಿಯದು. ಅದೇ ಜೀವನದ ಪ್ರತಿಬಿಂಬ ವೆನ್ನಿಸುತ್ತದೆ. ಮೊದಲಿಗೆ ಇಲ್ಲವೇ ಅಪರಾಧದ ಬೀಜಾರೋಪಣವೆ. ನಂತರ ಅದು ಕಾಲಕ್ರಮದಲ್ಲಿ ಮೊಳಕೆಯೊಡೆಯುತ್ತದೆ. ಕನ್ನಡಿಯಲ್ಲಿ ಶರೀರದ ಬಾಹ್ಯ ಸೌಂದರ್ಯವಷ್ಟೇ ಕಾಣುತ್ತದೆ. ಆದರೆ ಆತನಿಗೆ ಇರುವ ಶಾರೀರಿಕ ತೊಂದರೆ-ರೋಗ-ಇತ್ಯಾದಿಗಳಿಗೆ ಬೇರೊಂದು 'ಎಕ್ಸರೇ' ಯಂತ್ರದಿಂದಲೇ ತಿಳಿಯಬೇಕು. ಅದು ಒಳಗಿನ ಸೂಕ್ಷ್ಮತೆ ತಿಳಿಸುತ್ತದೆ. ಅದಕ್ಕೂ ಸೂಕ್ಷ್ಮವಾದದ್ದು ಭಾವನಾತ್ಮಕ ಬಿಂಬ. ಅದರಲ್ಲಿ ಅವರವರೇ ತಮ್ಮನ್ನು ನಿರೀಕ್ಷಿಸಿ-ಪರೀಕ್ಷಿಸುತ್ತಿದ್ದರೆ ಅವರ ಸಂಭಾವಿತತನದ ಪರಿಚಯವಾಗುತ್ತದೆ.

ಕಾರ್ಯವೆಂದರೆ ಶರೀರದಿಂದ ಸಂಭವಿಸಬಹುದಾದ ಪ್ರಮಾದ, ಅಪರಾಧ. ವಾಚಕವೆಂದರೆ ಮಾತಿನಿಂದ ಆಗುವ ನೋವು, ದುಃಖ. ಮಾನಸಿಕವೆಂದರೆ ಮನಸ್ಸಿನಿಂದ ಮೂಡುವ ಮಾತ್ಸರ್ಯ. ಹಗೆತನ ಇತ್ಯಾದಿಗಳು. ಇವೆಲ್ಲವೂ ಪಾಪಲೇಪಗಳೇ ಆಗಿವೆ. ಇವುಗಳಲ್ಲಿ ಕೆಲವು ಬಹಿರ್ಮುಖ, ಕೆಲವು ಅಂತರ್ಮುಖ. ಇವುಗಳು ಮೊದಲಿಗೆ ಅಂತರಂಗದಲ್ಲಿ ಮೂಡಿ ಬಹಿರಂಗಕ್ಕೆ ಬರುತ್ತವೆ. ಒಮ್ಮೆಲೇ ಇವು ಸ್ಫೋಟಗೊಳ್ಳುವುದಿಲ್ಲ. ಕಳವು ಮಾಡತಕ್ಕವ ಒಮ್ಮೆಲೆ ದುಡುಕುವುದಿಲ್ಲ. ಅದರ ಸಾಧಕ-ಬಾಧಕಗಳನ್ನೆಲ್ಲ ಮೊದಲಿಗೆ ಯೋಚಿಸುತ್ತಾನೆ. ತಂತ್ರ ರೂಪಿಸುತ್ತಾನೆ. ಹೇಗೆ ಮಾಡಿದರೆ ಸರಿ-ತಪ್ಪುಗಳ ಲೆಕ್ಕಾಚಾರ ನಡೆಸುತ್ತಾನೆ. ಈ ಕ್ರಿಯೆಗೆ ಆತನ ಮನೋಮಯ ಕೋಶ ಸಹಕರಿಸುತ್ತದೆ. ಅಲ್ಲಿಂದಲೇ ಮುಂದಿನ ಕಾಯಕದ ಸೂತ್ರ ಸಂಚಲನ. ಇದರಿಂದಗಿ ಪ್ರಪ್ರಥಮವಾಗಿಯೇ ಪಾಪದ ಕಾರ್ಯದ ಪ್ರೇರಣತೆ. ಮನಸ್ಸಿನಿಂದ ಮುಂದೆ ಕಾಯಕದ ಕಾರ್ಯಕ್ಕೆ ಸಹಕಾರಿಯಾಗಿ ನಿಲ್ಲುತ್ತದೆ. ಇಂಥಲ್ಲಿ ಪ್ರಥಮ ಅಪರಾಧಿಯೇ ಮನಸ್ಸು. ಅಪರಾಧವೊಂದು ಜರುಗಿದಾಗ ಅದಕ್ಕೆ ಸಹಕರಿಸಿದ-ಕುಮ್ಮಕ್ಕು ನೀಡಿದ ವ್ಯಕ್ತಿಯನ್ನೂ ಅಪರಾಧಿಯೆಂದೇ ತಿಳಿಯಲಾಗುತ್ತದೆ. ಹಾಗೇ ಇದು. ಮನಸ್ಸು

* ಹುಣಸೆಕೊಪ್ಪ ಅಂಚೆ, ಶಿರಸಿ, ಉತ್ತರ ಕನ್ನಡ ಜಿಲ್ಲೆ -೫೮೧ ೪೦೧.

ನಮ್ಮೊಳಗೆ ಇರುವುದರಿಂದಾಗಿ ನಾವೂ ಅಪರಾಧಿಯೇ ಆಗುತ್ತೇವೆಂದರೆ ಕಾಯಕದಿಂದ ಒಳ್ಳೆಯ ಕಾರ್ಯ ಜರುಗ ಬೇಕು. ಶರೀರ-ಮನಸ್ಸು ಇಂದ್ರಿಯಗಳ ಸಾರ್ಥಕತೆಯತ್ತ ಗಮನ ನೀಡಬೇಕು. ಕಾಯಕ ಶಬ್ದಕ್ಕೆ ವಿಶಿಷ್ಟ ಶ್ರೇಷ್ಠತೆ ಇದೆ. ಅದು ಜನೋಪಯೋಗಿಯಾಗಬೇಕು. ಒಳ್ಳೆಯದನ್ನು ನೋಡಬೇಕು. ಒಳ್ಳೆಯದನ್ನೇ ಕೇಳಬೇಕು. ಜನರೇ ಭಗವಂತನ ಪ್ರತಿಬಿಂಬ ವೆಂದು ತಿಳಿದು ಅವರ ಹಿತ-ಅಭ್ಯುದಯಕ್ಕೆ ಅವಶ್ಯವಿರುವ ಕಾರ್ಯಕ್ಕೆ ಸಹಕಾರಿಯಾದರೆ ಧನ್ಯತೆ ಎನ್ನಿಸುತ್ತದೆ. ಕಾಯಕ ಮೌಲ್ಯದ್ದಾಗುತ್ತದೆ.

ಮಾತು ಆಡಿದರೆ ಹೋಯಿತು. ಮುತ್ತು ಒಡೆದರೆ ಮುಗಿಯಿತು. ಇದೊಂದು ಗಾದೆ. ಅಂದರೆ ಇವೆರಡರ ಉಪಯುಕ್ತತೆಯನ್ನು ಗಮನಿಸುತ್ತಲೇ ಇರಬೇಕು. ಉದ್ವೇಗಕರ ಆವರ್ತದಲ್ಲಿ ಅಪ್ರಿಯ, ಅಹಿತಕರ ಮಾತನಾಡಿ ಕೊನೆಗೆ ಕ್ಷಮಿಸಿ ಎನ್ನುವುದುಂಟು. ಇದರಿಂದಾಗಿ ಬೇರೆಯವರ ಮನಸ್ಸಿಗಾದ ಗಾಯ-ನೋವು ಮಾಯವಾಗುತ್ತದೆಯೇ? ಆಯುಧದಿಂದ ಆದ ಗಾಯ ಔಷಧದಿಂದ ಕ್ರಮೇಣ ವಾಸಿಯಾದೀತು. ಆದರೆ ಮನಸ್ಸಿನ ಗಾಯ ಬೇಗನೆ ವಾಸಿ ಯಾಗುವುದಿಲ್ಲ. ಈ ರೀತಿ ಅನ್ಯರ ಮನಸ್ಸು ನೋಯಿಸುವುದು ವಾಚಿಕ ಅಪರಾಧ. ಅದಕ್ಕಾಗಿ 'ಅನುದ್ವೇಗ ಕರಂವಾಕ್ಯಂ ಸತ್ಯಂ ಪ್ರಿಯಹಿತಂ ಚಯತ್'. ಅಂತಲೇ ಭಗವದ್ಗೀತೆ ಎಚ್ಚರಿಸುತ್ತದೆ.

ಮಾನಸಿಕ ಅಪರಾಧ ಇನ್ನೂ ದೊಡ್ಡದು. ಅದು ಒಳಗೇ ಕುದಿಯುತ್ತಾ ಇರುತ್ತದೆ. ಸೌಂದರ್ಯ ಪ್ರಜ್ಞೆಯಿಂದ ಆನಂದ ಪಡುವ ಬದಲು ಪಾಪದ ಲೇಪಕ್ಕೆ ಅಂಟಿಕೊಳ್ಳುತ್ತದೆ. ಸುಂದರ ಶಿಲ್ಪ-ಕಲ್ಪಗಳನ್ನು - ಸ್ತ್ರೀಯರನ್ನು ಕಂಡಾಗ ಮಾತ್ರ ಅಥವಾ ಸಹೋದರಿ ಭಾವದ ಬದಲು-ಕಾಮಭಾವ ಮೂಡಿದರೆ ಅದೂ ಒಂದು ಅಪರಾಧ. ಮನಸ್ಸಿನಲ್ಲಿ ಮೂಡಿದ-ಮೋಹ-ಮಾದಕ ಕಲೆಯನ್ನು ತೊಡೆದು ಹಾಕಲು ಸಾಧ್ಯವಿಲ್ಲದೆ ಅದರ ಅಂಶ ಅಲ್ಲಿಯೇ ಅಲೆಯಾಗಿ ನೆಲೆಯಾಗು ತ್ತದೆ. ಇದೂ ಸಹ ಮಾನಸಿಕ ಸ್ಥಿತಿಯನ್ನು-ಪ್ರಸನ್ನತೆಯನ್ನು ಕಲುಷಿತಗೊಳಿಸುತ್ತದೆ. ನಮ್ಮಲ್ಲಿ ಘಟಿಸಬಹುದಾದ ಪಾಪದ ಅಪರಾಧಗಳು ಇಷ್ಟೊಂದು ಸೂಕ್ಷ್ಮ. ಇಂಥವುಗಳಿಂದ ಮುಕ್ತತೆ ಪಡೆಯದಿದ್ದರೆ ಜೀವನಕ್ಕೆ ಶುದ್ಧಿಯೂ ಇಲ್ಲ. ಸಿದ್ಧಿಯೂ ಇಲ್ಲ.

ಇವುಗಳಲ್ಲಿ ಕೆಲವು ಬಹಿರಂಗಗೊಳ್ಳದೆ ಇರಬಹುದು. ಅದರೂ ಅದು ಅಪರಾಧವೇ! ಕಟಾವು ಮಾಡಿದವನು ಸಿಕ್ಕದೇ ಇದ್ದರೆ-ಕೊಲೆ-ಮಾಡಿದವನು ತಪ್ಪಿಸಿಕೊಂಡರೆ ಆ ಅಪರಾಧ ಅವನಲ್ಲಿ ಮುಚ್ಚಿ ಹೋಗು ವುದಾಗಲೀ-ಮುಕ್ತನಾಗುವುದಾಗಲೀ ಆಗುವುದಿಲ್ಲ. ಸಾಕ್ಷಿ ಪುರಾವೆಗಳು ಇಲ್ಲದೇ ಎಷ್ಟೋ ಆಪಾದನೆಗಳು-ಅಪರಾಧಗಳು ನ್ಯಾಯಾಂಗ ದಿಂದ ಬಿಡುಗಡೆಯಾಗ ಬಹುದು. ಆದರೆ ಅಂತಃಸಾಕ್ಷಿಯಿಂದ ಅದಕ್ಕೆ ಮುಕ್ತತೆ ಇರುವುದಿಲ್ಲ. ಎಷ್ಟೋ ಜನರಿಗೆ ತಮ್ಮ ಅಪರಾಧಗಳನ್ನು ಅನ್ಯರು ನೋಡಿಲ್ಲ, ತಿಳಿದಿಲ್ಲ ಅಂತ ಅಂದುಕೊಳ್ಳಬಹುದು ಆದರೆ ಎಲ್ಲರ ಹೃದಯದಲ್ಲೂ ಅಂತಃಸಾಕ್ಷಿಯಾಗಿ "ಈಶ್ವರಃ ಸರ್ವ ಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ' ಅಂತ ತಿಳಿಸಿದಂತೆ ಭಗವಂತನೊಬ್ಬ ನಮ್ಮ ಹೃದಯ ಗುಹೆಯಲ್ಲಿ ಇರುತ್ತಿದ್ದು ಪಾಪ-ಪುಣ್ಯಗಳನ್ನೆಲ್ಲ ನಿರೀಕ್ಷಿಸುತ್ತಿರುತ್ತಾನೆ. ಅದರ ಲೆಕ್ಕಗಳನ್ನೂ ದಾಖಲಿಸುತ್ತಾನೆ. ಪಾಪವೇ ಇರಲಿ, ಪುಣ್ಯವೇ ಇರಲಿ ಅವುಗಳ ಜಮಾ-ಖರ್ಚು ನಿರ್ಧರಿಸುತ್ತಿರುತ್ತಾನೆ. ಅದು ಕೇವಲ ಒಂದು ಜನ್ಮದ್ದಲ್ಲ, ಹಿಂದಿನ ಜನ್ಮದ್ದೂ ಸೇರಿಕೊಳ್ಳುತ್ತದೆ. ಒಬ್ಬನು ಈ ಜನ್ಮದಲ್ಲಿ ತಾನು ಏನೂ ಅಪರಾಧ ಮಾಡಿಲ್ಲ-ಆದರೂ ಈ ಕಷ್ಟ-ಕ್ಲೇಶ ಯಾಕೆ ಬಂತಪ್ಪಾ ಅಂದುಕೊಂಡರೆ ಅದು ಹಳೆಯ ಸಂಚಿತವೆಂದೇ ತಿಳಿಯಬೇಕು. ಮನು ಮಹರ್ಷಿಯೂ ತಮ್ಮ ಸ್ಮೃತಿಯಲ್ಲಿ- 'ಪರದ್ರವ್ಯೇಭಿಧ್ಯಾನಂ ಮನಸಾ ಅನಿ ಚಿಂತನಂ, ವಿತಥಾಭಿ ನಿವೇಶಭ ತ್ರಿವಿಧಂ ಕರ್ಮಮಾನಸಂ'.

ಅಂದರೆ ಇನ್ನೊಬ್ಬನ ವಸ್ತು, ಅಪಹರಿಸುವುದು, ಅವಹೇಳನ, ಅನಿಷ್ಟ ಚಿಂತನ ಇವು ಪಾಪಕಾರ್ಯಗಳು. ಇವು ಆತನೊಂದಿಗೇ ಸೇರಿಕೊಳ್ಳುತ್ತವೆ. ಆಗ ಅದರಿಂದ ಪರಿಶುದ್ಧರಾಗುವುದು ಹೇಗೆ? ಧರ್ಮದ ಸೂಕ್ಷ್ಮತೆ ಇರುವುದೇ ಇಲ್ಲಿ. ಈ ಕಾರಣಕ್ಕಾಗಿ ತ್ರಿಕರಣ ಶುದ್ಧಿ-ಸದಾ ಇರ ಬೇಕಾದದ್ದು-ಅದೇ ಜೀವನ ಸಿದ್ಧಿಯ ಭವ್ಯ ಬುನಾದಿ. ಇದನ್ನು ಜಾಗ್ರತೆ, ಸ್ವಪ್ನ-ನಿದ್ರಾವಸ್ಥೆಯಲ್ಲಿ ಸಹ ಈ ತ್ರಿಕರಣಗಳು ಪವಿತ್ರವಾಗಿರುವ ಜೀವನ ಪುನೀತ-ಪಾವನ. ಅಂತರಿಂದ್ರಿಯ-ಬಹಿರಿಂದ್ರಿಯಗಳ ಶುದ್ಧಿಯಿಂದ ಮಾತ್ರ ಜೀವನ ಸಿದ್ಧಿ ಸಾಧ್ಯ. ಭಗವಂತ ಅನುಗ್ರಹಿಸಿದ ಮಾನವ ಜನ್ಮವೂ ಸಾರ್ಥಕ.

"ಯದ್ಭದ್ಯಂ ತನ್ಮಾಆಸುವ"







## ಸದ್ದಿಲ್ಲದ ಕ್ರಿಯೆಗಳು

-- ರಾಜಶೇಖರಯ್ಯ *

ನಮ್ಮ ಶರೀರದ ಅಂಗಾಂಗಗಳಾದ ಜಠರ, ಹೃದಯ, ಮೆದುಳು, ಶ್ವಾಸಕೋಶ, ಮೂತ್ರಕೋಶ ಇತ್ಯಾದಿ ಕಣ್ಣಿಗೆ ಕಾಣದ ಬಹುಸಂಖ್ಯಾತ ಅಂಗಾಂಗಗಳು ಹುಟ್ಟಿದಂದಿನಿಂದ ಸಾಯುವವರೆಗೂ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆ. ಈ ಅಂಗಾಂಗಗಳ ಬಗ್ಗೆ ನಾವು ಕಿಂಚಿತ್ತೂ ಯೋಚಿಸು ವುದಿಲ್ಲ. ಅವುಗಳು ರಿಪೇರಿಗೆ ಬಂದಾಗ ಮಾತ್ರ ಅವುಗಳ ಬೆಲೆ ಗೊತ್ತಾಗುತ್ತದೆ. ಆದ್ದರಿಂದ ಇವುಗಳು ಕೆಡದ ಹಾಗೆ ಮುಂಜಾಗ್ರತೆ ವಹಿಸುವುದು ಕ್ಷೇಮವಲ್ಲವೇ?

ಸದ್ದುಗದ್ದಲವಿಲ್ಲದೆ, ಸಲಹೆ-ಸೂಚನೆಗಳಿಲ್ಲದೆ, ಕಾಲಮಿತಿಯಿಲ್ಲದೆ, ಹಗಲಿರುಳೆನ್ನದೆ, ಬಡವ ಬಲ್ಲಿದ ಎಂಬ ಭೇದವಿಲ್ಲದೆ-ವಯೋಮಾನಕ್ಕೆ ತಕ್ಕ ಜೀರ್ಣ ಕ್ರಿಯೆಗಳು ನಮ್ಮ ಶರೀರದಲ್ಲಿ ನಡೆಯುತ್ತಾ ಸಾಗುತ್ತಿವೆ. ಕೆಲವೇ ಮಂದಿ ಈ ಕ್ರಿಯೆಯ ಬಗ್ಗೆ ಯೋಚಿಸಿದರೆ, ಮತ್ತೆ ಹಲವು ಮಂದಿ ಯೋಚಿಸದೆ, ಚಿಂತಿಸದೆ ಹೊಟ್ಟೆಗೆ ಮೂರು ನಾಲ್ಕು ಬಾರಿ ಆಹಾರ ತುಂಬುತ್ತೇವೆ. ಹೊಟ್ಟೆ ಎನ್ನುವುದೇನು? ಶ್ರೀಕಂಠಪ್ಪನ ಕಟ್ಟೆಯೇ? ತೇಗು ಬಂದಾಗ ಮೇಲೂ ತಿನ್ನುವ ಹಲವು ಮಂದಿ ಇದ್ದಾರೆ. ಅದಕ್ಕೆ ಅನುಭವಾಮೃತ ಹೇಳುತ್ತದೆ.

*ಜೀವಿಸಲು ತಿನ್ನು,*

*ತಿನ್ನುವುದೇ ಜೀವನವಲ್ಲ*

[illegible] ತಿನ್ನುವುದರಿಂದ ಆರೋಗ್ಯ ನಮ್ಮ ಹಿಡಿತದಲ್ಲಿರುತ್ತದೆ. ತಿನ್ನುವವರಿಗೊಂದು ಪ್ರಶ್ನೆ - ತಿನ್ನುವಾಗ ನಾವೇನು ತಿನ್ನುತ್ತೇವೆ? ಎಷ್ಟು ತಿನ್ನುತ್ತೇವೆ ? ಏಕೆ ತಿನ್ನುತ್ತೇವೆ? ತಿಂದದ್ದು ಏನಾಗುತ್ತದೆ? ನಾವು ತಿನ್ನುವ ಆಹಾರ ಆರೋಗ್ಯ ಪೂರ್ಣವೇ? ಎನ್ನುವುದರ ಬಗ್ಗೆ ಕಿಂಚಿತ್ತೂ ಯೋಚಿಸದೆ ಬಕಪಕ್ಷಿಗಳಂತೆ ಒಳಕ್ಕೆ ಇಳಿಬಿಡುತ್ತೇವೆ. ಇನ್ನು ಮದುವೆ, ಹುಟ್ಟಿದಹಬ್ಬ. ಸಭೆ ಸಮಾರಂಭಗಳಲ್ಲಿ ಮೂಗು ಮತ್ತು ನಾಲಿಗೆಗೆ ಪ್ರಿಯವಾದ ಭಕ್ಷ್ಯಭೋಜನಗಳನ್ನು ಲೆಕ್ಕಿಸದೆ ನಿರಾತಂಕವಾಗಿ ತಿನ್ನುತ್ತೇವೆ. ಒಂದು ವೇಳೆ ಆರೋಗ್ಯ ಕೆಟ್ಟಾಗ, ನಾವು ಹೀಗೆ ತಿನ್ನಬಾರದಿತ್ತು ಎಂದು ಪಶ್ಚಾತ್ತಾಪ ಪಡುತ್ತೇವೆ. ಇತ್ತೀಚೆಗಂತೂ ಟಿವಿ ನೋಡಿಕೊಂಡು ತಿನ್ನುವುದು ಅಭ್ಯಾಸವಾಗಿಬಿಟ್ಟಿದೆ. ಇದೇ ನಾಗರೀಕ ಲಕ್ಷಣ ಎನ್ನುವವರೂ ಇದ್ದಾರೆ. ಟಿವಿ ನೋಟದಲ್ಲಿ - ಶುಚಿ, ರುಚಿ, ಸಮಯ, ಪ್ರಜ್ಞೆ ಗಾತ್ರ ಯಾವುದೂ ಗಮನಕ್ಕೆ ಬರುವುದಿಲ್ಲ. ಇದೊಂದು ಕೆಟ್ಟ ಸಂಪ್ರದಾಯವೆಂದು ಆರೋಗ್ಯ ತಜ್ಞರು ಹೇಳುತ್ತಾರೆ. ಇದೆಲ್ಲಾದರೂ ಹೋಗಲಿ ಕೆಲವು ತಾಯಂದಿರು ತಮ್ಮ ಮಕ್ಕಳಿಗೆ ತಾವೇ ಟಿವಿ ಚಾಲೂ ಮಾಡಿ ಮಗುವಿನ ಹೊಟ್ಟೆಗೆ ತುಂಬುತ್ತಾರೆ. ಇದು ಸರಿಯೇ ? ಇಲ್ಲೊಂದು ವರದಿ ಇದೆ ನೋಡಿ - ಜಾರ್ಜಿಯಾ ಎಂಬ ಲಂಡನ್ ಯುವತಿ ದಿನಕ್ಕೆ ೧೩,೦೦೦ ಕ್ಯಾಲರಿಯ ಆಹಾರ ಸೇವಿಸಿ ೩೫೦ ಕೆ.ಜಿ. ತೂಕವಿದ್ದಾಳಂತೆ. ಈ ೨೨ ವರ್ಷದ ತರುಣಿ ಒಮ್ಮೆ ಕಾಯಿಲೆ ಬಿದ್ದಾಗ ಆಸ್ಪತ್ರೆಗೆ ಸಾಗಿಸಲು ಎರಡು ಕ್ರೇನ್ ಬಳಸಿ ಔಷಧೋಪಚಾರ ಮಾಡಿ ಮತ್ತೆ ಮನೆಗೆ ವಾಪಸ್ ತರಲು ೬.೫ ಲಕ್ಷ ರೂಗಳು ಖರ್ಚಾಯಿತಂತೆ. (ವಿಜಯವಾಣಿ. ೫-೫-೨೦೧೫ ಪುಟ ೧೦) ಇದು ನಮಗೆ ನಗು ಮತ್ತು ಆಶ್ಚರ್ಯ ತಂದರೂ ಅನುಭವಿಸಿದವರ ಕಷ್ಟ ದೊಡ್ಡದಲ್ಲವೇ? ನಾವು ಈಗಾಗೋದು ಬೇಡ.

ನಾವೇನೋ ತಿನ್ನುತ್ತೇವೆ ಆದರೆ ನಮ್ಮೊಳಗಿನ ಜಠರದ ಪಾಡೇನು? ಎಂದು ಯೋಚಿಸುವುದಿಲ್ಲ. ಶರೀರದೊಳಗಿನ ಅಂಗಾಂಗಗಳು ಮೇಲಿಂದ ಬರುವ ಆಹಾರವನ್ನು ಬೇರ್ಪಡಿಸಿ, ವಿಂಗಡಿಸಿ- ರಕ್ತ ಮತ್ತು ಶಕ್ತಿಗಳನ್ನಾಗಿ ಮಾರ್ಪಡಿಸಲು ಎಷ್ಟು ಕಷ್ಟವೆಂಬುದು ನಮಗೆ ತಿಳಿಯದು. ಇನ್ನು ಉಳಿದಿದ್ದನ್ನು ಹೊರಹಾಕುವುದೂ ಒಂದು ಸಮಸ್ಯೆ. ಇದಾವುದನ್ನೂ ನಾವು ಯೋಚಿಸದೆ, **ತಿನ್ನುವುದು ನಮ್ಮ ಧರ್ಮ. ಕರಗಿಸುವುದು ಜಠರದ ಕರ್ಮ** ಎಂದು ಸುಮ್ಮನಾಗುತ್ತೇವೆ. ಈ ಅಂಗಾಂಗಗಳು ರಿಪೇರಿಗೆ ಬಂದಾಗ ಮಾತ್ರ ಅವುಗಳರಿವು ಮನದಟ್ಟಾಗುತ್ತದೆ.

* ನಂ. ೧೧೨೮, 'ಶ್ರೀ ಸಿದ್ಧಲಿಂಗ ಕೃಪ' ೩ನೇ ಕ್ರಾಸ್, ಎಸ್.ಐ.ಟಿ. ಮುಖ್ಯರಸ್ತೆ, ತುಮಕೂರು-೩. ಮೊ. : 9449010861

ಶರೀರದ ಎಲ್ಲಾ ಅಂಗಾಂಗಗಳ ಕ್ರಿಯೆಗೆ ಆಹಾರವೇ ಮೂಲವಾಗಿರುವುದರಿಂದ ತಿನ್ನುವ ಆಹಾರದ ಬಗ್ಗೆ ತಿಳಿದು ಕೊಳ್ಳುವುದು ಒಳಿತು. ಮನುಷ್ಯ ಆರೋಗ್ಯವಾಗಿರಬೇಕಾದರೆ ಅವನು ಸೇವಿಸುವ ಆಹಾರದಲ್ಲಿ

೧) **ಪಿಷ್ಟಮಯ (ಕಾರ್ಬೋಹೈಡ್ರೇಟ್ಸ್)** ಸಕ್ಕರೆ, ಬೆಲ್ಲ, ಅಕ್ಕಿ, ಗೋಧಿ, ರಾಗಿ, ಜೋಳ, ನವಣೆ, ಓಟ್ಸ್ ಮುಂತಾದ ಏಕದಳ ಧಾನ್ಯಗಳಲ್ಲಿ ಹೆಚ್ಚು ಸಿಗುತ್ತವೆ. ಇವು ದೇಹಕ್ಕೆ ಶಕ್ತಿಯನ್ನು ಕೊಡುತ್ತವೆ.

೨) **ಸಸಾರಜನಕ (ಪ್ರೋಟೀನ್ಸ್)** ದ್ವಿದಳ ಧಾನ್ಯಗಳಾದ ಬೇಳೆ ಕಾಳುಗಳಲ್ಲಿ ಹಾಲು, ಮೊಸರು, ಮಜ್ಜಿಗೆಯಲ್ಲಿ ಸಿಗುತ್ತವೆ. ಇವು ದೇಹದ ಬೆಳವಣಿಗೆಗೆ ಸಹಾಯಕ ವಾಗಿವೆ.

೩) **ಜಿಡ್ಡು (ಕೊಬ್ಬು, ಮೇದಸ್ಸು ಫ್ಯಾಟ್)** ಬೆಣ್ಣೆ, ತುಪ್ಪ, ಎಣ್ಣೆ ಕಾಳುಗಳಾದ ಕುಸುಮೆ, ಅಗಸೆ ಇತ್ಯಾದಿ. ಇದರ ಜೊತೆಗೆ ಖನಿಜ ಮತ್ತು ಖನಿಜ ಲವಣಗಳು, ವಿಟಮಿನ್ಸ್ (ಜೀವಸತ್ವಗಳು) ಲಘುಪೋಷಕಾಂಶಗಳು (ಮೈಕ್ರೋ ನ್ಯೂಟ್ರಿಯಂಟ್ಸ್) ಇವುಗಳು ದೇಹದ ಬೆಳವಣಿಗೆಗೆ ಬಹುಮುಖ್ಯ ಪಾತ್ರ ವಹಿಸುತ್ತವೆ. ಇದರ ಜೊತೆಗೆ **ಸಪ್ತಧಾತುಗಳಾದ ನರ, ರಕ್ತ, ಮಾಂಸ, ಮೇದಸ್ಸು, ಎಲುಬು, ಮಜ್ಜೆ** ಇತ್ಯಾದಿ ಬೆಳೆಯಲು ಷಡ್‌ರಸಗಳಾದ **–ಉಪ್ಪು, ಖಾರ, ಹುಳಿ, ಸಿಹಿ, ಒಗರು, ಕಹಿ** ಸಹಾಯಕವಾಗಿ ಧಾತುಗಳು ಉತ್ಪತ್ತಿಯಾಗುತ್ತವೆ.

**ಆರೋಗ್ಯದ ರಹಸ್ಯಗಳು**

೧. ಹೊಟ್ಟೆಗೆ ೭೦% ಆಹಾರ ೨೦% ದ್ರವಾಹಾರ ೧೦% ಖಾಲಿ ಬಿಡಬೇಕು.

೨. ಅಕಾಲ ಭೋಜನ ಆತಂಕಕ್ಕೆ ಆಹ್ವಾನ.

೩. ಆಹಾರವನ್ನು ೧೫–೨೦ಬಾರಿ ಅಗಿದು ತಿನ್ನಬೇಕು.

೪. ಶಿಸ್ತು ಬದ್ಧ ಜೀವನದಿಂದ ಅನೇಕ ಖಾಯಿಲೆಗಳು ದೂರವಾಗುತ್ತವೆ.

೫. ಪ್ರತಿ ದಿವಸ ೮೦೦೦–೧೦೦೦೦ ಹೆಜ್ಜೆ ನಡೆಯಬೇಕು.

ಆರೋಗ್ಯವಾಗಿ ಸುಖ, ಶಾಂತಿ ಮತ್ತು ಸಂತೃಪ್ತಿ ಯಿಂದಿರಬೇಕಾದರೆ ಹೆಚ್ಚು ಉಪ್ಪು, ಹುಳಿ, ಖಾರ, ಸಿಹಿ, ಒಗರು ಮತ್ತು ಕಹಿ ಇಲ್ಲದ ಆಹಾರವನ್ನು ಸೇವಿಸಬೇಕು. ಉರಿದ ಮತ್ತು ಕರಿದ ಆಹಾರವನ್ನು ಕಡಿಮೆಗೊಳಿಸಬೇಕು. ಸೊಪ್ಪು ಹಣ್ಣು ಮತ್ತು ತರಕಾರಿಗಳನ್ನು ಯಥೇಚ್ಛವಾಗಿ ಬಳಸಬೇಕು. ಸಾಕಷ್ಟು ನೀರು ಕುಡಿಯಬೇಕು. ಮೈಯಿಂದ ಬೆವರು ಹೊರಬರಬೇಕು. **ತಟ್ಟೆ ತುಂಬಾ ತರಕಾರಿ, ಹೊಟ್ಟೆ ತುಂಬಾ ಹಿಟ್ಟು, ಬಾಯಿ ತುಂಬಾ ಅನ್ನ** ಸೇವಿಸುವುದು ಸರ್ವೋತ್ತಮ.

ನಮ್ಮ ಅಂಗಾಂಗಗಳು ಆರೋಗ್ಯದಿಂದಿದ್ದು ಕಾರ್ಯ ನಿರ್ವಹಿಸಬೇಕಾದರೆ, ನಾವು ತೆಗೆದುಕೊಳ್ಳುವ ಆಹಾರ ಗುಣಮಟ್ಟದ ಪೌಷ್ಟಿಕ ಸಮತೋಲನ ಆಹಾರವಾಗಿರಬೇಕು. ಸಮಯಕ್ಕೆ ಸರಿಯಾಗಿ ಆಹಾರ ಸೇವನೆ ಮಾಡಬೇಕು. ತಿನ್ನುವ ಆಹಾರ ಮತ್ತು ನೀರು ಶುದ್ಧವಾಗಿರಬೇಕು. ಹಸಿದು ತಿನ್ನಬೇಕು. ಶ್ರಮದ ಬದುಕು ತೃಪ್ತಿ ಜೀವನದ ಮೂಲ. ಸಾತ್ವಿಕ ಆಹಾರ ಸರ್ವಶ್ರೇಷ್ಠ.

❑



ಆನೆಯನೇರಿಕೊಂಡು ಹೋದಿರೆ ನೀವು?
ಕುದುರೆಯನೇರಿಕೊಂಡು ಹೋದಿರೆ ನೀವು?
ಕುಂಕುಮ ಕಸ್ತೂರಿಯ ಪೂಸಿಕೊಂಡು, ಹೋದಿರೆ ಅಣ್ಣಾ
ಸತ್ಯದ ನಿಲವನರಿಯದೆ ಹೋದಿರಲ್ಲಾ!
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ,
ಅಹಂಕಾರವೆಂಬ ಸದಮದ ಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲ ಸಂಗಮ ದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ.

– ಬಸವಣ್ಣ





# ಆನೆಬಲದ ಆನೆಮುಂಗು
# Oroxylum Indicum Vent Bignonaceae

– ಡಾ|| ಶೈಲೇಶ್ ಎಂ.ಡಿ. *

ಆನೆಮುಂಗು ಎಂಬ ಹೆಸರು ಕೇಳಿದ ಕೂಡಲೇ ಈ ದ್ರವ್ಯ ಆನೆಗೆ ಹೋಲುತ್ತದಾ! ಎಂಬ ಪ್ರಶ್ನೆ ಬರುವುದು ಸರ್ವೇ ಸಾಮಾನ್ಯ. ಅದು ಹೌದು ಕೂಡಾ. ಯಾಕೆಂದರೆ, ಈ ದ್ರವ್ಯದ ಕೋಡುಗಳು ಆನೆಯ ಸೊಂಡಿಲಿನಂತೆ ಉದ್ದ ವಾಗಿದೆ. ಆಯುರ್ವೇದದ ಪ್ರಖ್ಯಾತ ಔಷಧಿ ಮತ್ತು ಬಾಣಂತಿ ಯರಿಗೆ ಶಕ್ತಿವರ್ಧಕವಾಗಿ ಕುಡಿಯಲು ಕೊಡುವ 'ದಶಮೂಲಾರಿಷ್ಟ' ಎಂಬ ಔಷಧದಲ್ಲಿ ಆನೆಮುಂಗು ಒಂದು ಪ್ರಮುಖ ಘಟಕ. ಈ ಮರದ ಉಪಯೋಗದ ಬಗ್ಗೆ ಜನರಲ್ಲಿ ತಿಳುವಳಿಕೆ ಇಲ್ಲದೆ ಇರುವುದರಿಂದ ಈ ಮರದ ಸಂತತಿಯು ನಾಶದಂಚಿನಲ್ಲಿದೆ. ಪಶ್ಚಿಮಘಟ್ಟದಲ್ಲಿ ಹೆಚ್ಚಾಗಿ ಬೆಳೆಯುವ ಈ ಮರವು ಕರಾವಳಿ ಪ್ರದೇಶದಲ್ಲಿ ಅಪರೂಪವಾಗಿ ಬೆಳೆಯುತ್ತದೆ. ಭಾವಮಿಶ್ರನ ಪ್ರಕಾರ ಹಣ್ಣಾಗದ ಆನೆಮುಂಗು ಫಲವು ವಾತಕಫಹರ ಮತ್ತು ಹಣ್ಣಾದ ಆನೆಮುಂಗು ಮರವು ವಾತಕರಹವಾಗಿದೆ.

**ಬಹು ಭಾಷಾ ಹೆಸರುಗಳು**

| | | |
|---|---|---|
| ಕನ್ನಡ | : | ಆನೆಮುಂಗು |
| ಸಂಸ್ಕೃತ | : | ಶ್ಯೋನಕ |
| ಹಿಂದಿ | : | ಅರ್ಲು |
| ಇಂಗ್ಲಿಷ್ | : | ಈಗಲ್‌ವುಡ್ |
| ತುಳು | : | ಆನೆಮುಂಗ್ |

**ಪರ್ಯಾಯ ಪದಗಳು**

ಶ್ಯೋನಾಕ, ಕಟ್‌ವಂಗ, ಕುಟನ್ನಾಟ್, ತುಂತುಕ, ದೀರ್ಘ ವೃಂಕ, ಮಂಡೂಕಪರ್ಣ, ಸುಖನಾಶಾ, ಭಲ್ಲೂಕ, ಪೃತುಶಿಂಬ, ಮಯೂರಜಂಗಾ, ಅರಲು, ಪ್ರಿಯಜೀವ, ರೂಕ್ಷ, ತಿಂತುಕ, ಶೋಷಣ.

**ದ್ರವ್ಯದ ವರ್ಣನೆ**

ಆನೆಮುಂಗು ದೊಡ್ಡದಾಗಿ ಬೆಳೆಯುವ ಮರ. ಇದು ಸುಮಾರು ೧೦–೧೨ ಮೀಟರ್‌ನಷ್ಟು ಎತ್ತರಕ್ಕೆ ಬೆಳೆಯುತ್ತದೆ. ಅಷ್ಟೇನು ದಪ್ಪವಲ್ಲದ ಕಾಂಡಗಳು ನೇರವಾಗಿ ಬೆಳೆಯು ವುದು. ೦೫–೧ ಮೀಟರ್ ಉದ್ದವಿರುವ ಹಕ್ಕಿ ಆಕಾರದ ಸಂಯುಕ್ತ ಎಲೆಗಳ ಕವಲು ರೆಂಬೆಗಳ ಮೇಲೆ ಕಿರುಪತ್ರ ಬೆಳೆಯುವುದನ್ನು ನಾವು ಕಾಣಬಹುದು. ಹೂವಿನತೊಟ್ಟು ೨೪–೩೦ ಸೆಂ.ಮೀ. ನಷ್ಟು ಉದ್ದವಾಗಿದೆ. ಹೂವಿನ ಬಣ್ಣವು ಹೊರಗಡೆ ಕೆಂಪುಮಿಶ್ರಿತ ತಿಳಿ ನೇರಳೆಯಾಗಿದ್ದರೆ, ಒಳಗಡೆ ಕೆಂಪು ಮಿಶ್ರಿತ ಹಳದಿಯಾಗಿರುತ್ತದೆ. ಹೂವಿನಲ್ಲಿ ೫ ಕೇಸರುಗಳು ಕಂಡು ಬರುತ್ತವೆ. ಆನೆಮುಂಗು ಕೋಡು ೦.೩೩–೧ ಮೀಟರ್‌ನಷ್ಟು ಉದ್ದವಾಗಿದೆ. ಈ ದ್ರವ್ಯವು ಹೂವನ್ನು ಮಳೆಗಾಲದಲ್ಲಿ, ಫಲವನ್ನು ಚಳಿಗಾಲದಲ್ಲಿ ಬಿಡುತ್ತದೆ. ಸಾಮಾನ್ಯವಾಗಿ ನಮ್ಮ ಸುತ್ತಮುತ್ತ ಅಪರೂಪ ವಾಗಿ ಬೆಳೆಯುವ ಈ ದ್ರವ್ಯವು ಪಶ್ಚಿಮಘಟ್ಟ, ಶ್ರೀಲಂಕಾ ದೇಶಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

**ವಿಧಗಳು :** ಆಯುರ್ವೇದ ಗ್ರಂಥದಲ್ಲಿ ಇನ್ನೊಂದು ವಿಧವನ್ನು ಕಾಣದಿದ್ದರೂ ಆನೆಮುಂಗುವಿನಲ್ಲಿ ಇನ್ನೊಂದು ವಿಧವಿದೆ. ಅದು ದೊಡ್ಡಮರವಾಗಿ ಬೆಳೆಯುತ್ತದೆ ಮತ್ತು ಅದರ ಎಲೆಯು ಬೇವಿನ ಎಲೆಗೆ ಹೋಲುತ್ತದೆ ಮತ್ತು ಕೆಟ್ಟ ವಾಸನೆಯಿಂದ ಕೂಡಿದೆ.

**ಉಪಯುಕ್ತ ಅಂಗಗಳು**

* ಹಣ್ಣು * ಬೀಜ * ಬೇರಿನ ತೊಗಟೆ

**ದ್ರವ್ಯದ ಗುಣಧರ್ಮಗಳು**

ರಸ : ಮಧುರ, ತಿಕ್ತ, ಕಷಾಯಾ
ಗುಣ : ಲಘು, ರೂಕ್ಷ

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.

ವೀರ್ಯ : ಉಷ್ಣ

ವಿಪಾಕ : ಕಟು

ಕರ್ಮ : ಕಫವಾತಹರ, ದೀಪನ, ಗ್ರಾಹೀ, ಪಾಚನ, ರೋಪಣ, ಜ್ವರಾಘ್ನ, ಮೂತ್ರಲ, ವ್ರಣರೋಪಣ.

*ಶ್ಯೋನಾಕೋ ದೀಪನಃ ಪಾಕೇ ಕಟುಕಸ್ತುವರೋ ಹಿಮಃ ।*
*ಗ್ರಾಹೀ ತಿಕ್ತೋऽನಿಲಶ್ಲೇಷ್ಮಪಿತ್ತಕಾಸಪ್ರಣಾಶನಃ ॥*

(ಭಾವಪ್ರಕಾಶ)

ಆನೆಮುಂಗು ತಿಕ್ತ, ಕಷಾಯರಸದಿಂದ ಕೂಡಿದೆ. ಶೀತ ವೀರ್ಯದಿಂದ ಕೂಡಿದೆ. ಕಟುವಿಪಾಕದಿಂದ ಕೂಡಿದೆ. ದೀಪನ ಗ್ರಾಹೀ ಕಾರ್ಯ ನಿರ್ವಹಿಸುತ್ತದೆ. ವಾತಪಿತ್ತಕಫ ಶಾಮಕವಾಗಿದೆ. ಕೆಮ್ಮುರೋಗಕ್ಕೆ ಒಳ್ಳೆಯದು.

***ಔಷಧಿ ಪ್ರಮಾಣ***

ಚೂರ್ಣ . ೩-೬ ಗ್ರಾಂ.

ಕಷಾಯ : ೪೦-೮೦ ಮಿ.ಲೀ.

ರಸ : ೧೨-೨೦ ಮೀ.ಲೀ.

ಪುಟಪಾಕರಸ : ೨೦-೫೦ ಮಿ.ಲೀ.

***ಔಷಧೀಯ ಯೋಗಗಳು***

* ದಶಮೂಲಾರಿಷ್ಠ
* ದಶಮೂಲಾದಿ ಕ್ವಾಥ
* ಶ್ಯೋನಾಕಾದಿ ಯೋಗ
* ಶ್ಯೋನಾಕ ತೈಲ
* ಶ್ಯೋನಾಕ ಕ್ಷಾರತೈಲ
* ಶ್ಯೋನಾಕ ಪುಟಪಾಕ

***ಔಷಧೀಯ ಉಪಯೋಗಗಳು***

* ಆನೆಮುಂಗು ಪುಟಪಾಕ ರಸ ಸೇವನೆಯಿಂದ ಅತಿಸಾರ ನಿವಾರಣೆ.
* ಆನೆಮುಂಗು, ಅಗ್ನಿಮಂಥ, ಮುತ್ತುಗ, ಕಳ್ಳಂಗಡಲೆ, ಬಾಳೆ, ಉತ್ತರಾಣಿ ಇವುಗಳನ್ನು ಉಪಯೋಗಿಸಿ ತಯಾರಿಸಿದ ಎಣ್ಣೆಯ ಸೇವನೆ ಮಾಡುವುದರಿಂದ ಉದರ ರೋಗ ನಿವಾರಣೆ.
* ಆನೆಮುಂಗುವಿನಿಂದ ತಯಾರಿಸಿದ 'ಮೂಲಕ ತೈಲ' ಉಪಯೋಗದಿಂದ ವಾತವ್ಯಾಧಿ ನಿವಾರಣೆ.
* ಸಬ್ಬಸ್ಸಿಗೆ ಸೊಪ್ಪು, ದಾಲ್ಚಿನ್ನಿ, ಕಲ್ಲಂಗಡಲೆ ಬೇರು, ಆನೆ ಮುಂಗು, ಹರಳ, ಕಕ್ಕೆಕಾಯಿ, ತುಪ್ಪ, ಜೇನುಮೇಣ ಉಪಯೋಗಮಾಡುವುದರಿಂದ ಮೂಗಿನ ರೋಗ ನಿವಾರಣೆ.
* ಆನೆಮುಂಗುತೈಲ ಉಪಯೋಗಿಸುವುದರಿಂದ ಕಿವಿಯ ರೋಗ ಮುಕ್ತಿ.
* ಆನೆಮುಂಗು ಬೇರಿನ ಕಷಾಯಸೇವನೆಯಿಂದ ಆಮವಾತ, ಸಂಧಿವಾತ, ಊತರೋಗ ನಿವಾರಣೆ.
* ಆನೆಮುಂಗು ಬೇರಿನ ತೊಗಟೆ ರಸದಿಂದ ಗಾಯ ತೊಳೆಯುವುದರಿಂದ ಗಾಯ ನಿವಾರಣೆ.
* ಆನೆಮುಂಗು ಫಲದ ಕಷಾಯ ಸೇವನೆಯಿಂದ ಹೃದಯ ರೋಗ, ಗಂಟಲುರೋಗ, ಮೂಲವ್ಯಾಧಿ, ಅಸ್ತಮಾ, ಕೆಮ್ಮು ನಿವಾರಣೆ.
* ಆನೆಮುಂಗು ಹಣ್ಣಿನ ಚೂರ್ಣ ತುಂಬಾ ದಿವಸದವರೆಗೆ ಸೇವಿಸಿದರೆ ತೊನ್ನು ರೋಗ ನಿವಾರಣೆ.
* ಆನೆಮುಂಗು ಎಳೆಕಾಯಿ ಸೇವನೆಯಿಂದ ಹೊಟ್ಟೆ ಯುಬ್ಬರ ಕಡಿಮೆಯಾಗುತ್ತದೆ.
* ಆನೆಮುಂಗು ಬೇರಿನ ಚೂರ್ಣವನ್ನು ೫ ಗುಂಜಿಯಷ್ಟು ದಿವಸಕ್ಕೆ ೩ ಬಾರಿ ಸೇವಿಸುವುದರಿಂದ ಬೇಧಿ, ರಕ್ತಬೇಧಿ, ಕೆಮ್ಮು ಮತ್ತು ಹೊಟ್ಟೆಯುಬ್ಬರ ನಿವಾರಣೆ.

❑







## ರಾಷ್ಟ್ರಪ್ರಶಸ್ತಿ ವಿಜೇತರಿಗೆ ಅಭಿನಂದನೆ




ಶ್ರೀಮತಿ ಎನ್.ಬಿ. ಸರೋಜಮ್ಮ ಇವರು ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾ.ಜಿಲ್ಲೆ. ಹಳೇನಿಜಗಲ್ ಗ್ರಾಮದ ಉತ್ತಮ ಶಿಕ್ಷಕರಾಗಿದ್ದ ಶ್ರೀ ಬಸಪ್ಪನವರ ಸುಪುತ್ರಿಯಾಗಿ ಜನಿಸಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಸ್ವಗ್ರಾಮದಲ್ಲಿ ಮುಗಿಸಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಶ್ರೀ ಸಿದ್ಧಗಂಗಾ ಪ್ರೌಢಶಾಲೆ, ಹಿರೇಹಳ್ಳಿಯಲ್ಲಿ ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿ ನಂತರ ಶ್ರೀಮಠದಲ್ಲಿರುವ ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆಯಲ್ಲಿ ಶಿಕ್ಷಣ ತರಬೇತಿ ಮುಗಿಸಿ ೧೯೯೧ರಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಶಿಕ್ಷಕಿಯಾಗಿ ನೇಮಕಗೊಂಡರು. ಮಕ್ಕಳಿಗೆ ಉತ್ತಮ ಶಿಕ್ಷಣ, ಸದೃಢ ಸಮಾಜಮುಖಿಗಳನ್ನಾಗಿ ಮಾಡಿ ಮಕ್ಕಳನ್ನು ಶೈಕ್ಷಣಿಕವಾಗಿ, ನೈತಿಕವಾಗಿ ಬೆಳೆಸಬೇಕೆಂದು ಮನಸ್ಸು ಮಾಡಿದರು. ಶಿಕ್ಷಣ ಕ್ಷೇತ್ರದಲ್ಲಿ ಅವರು ತೋರಿರುವ ಆಸಕ್ತಿ ಮಕ್ಕಳಿಗೆ ಉತ್ತಮ ಬೋಧನೆ, ಸಾಧನಾ ಪರ ಕಾರ್ಯಗಳು, ಸಮಾಜದಲ್ಲಿ ಜನಪರ ಕಾರ್ಯಗಳಲ್ಲಿ ಸಕ್ರಿಯ ಭಾಗವಹಿಸುವಿಕೆ, ಮಕ್ಕಳಿಗೆ, ಪೋಷಕರಿಗೆ ಪ್ರೇರಣೆಯಾಗಿ ಇವರು ಗ್ರಾಮಸ್ಥರಿಂದ, ಇಲಾಖೆಯಿಂದ, ಪೋಷಕರಿಂದ ಮಿಗಿಲಾಗಿ ವಿದ್ಯಾರ್ಥಿಗಳಿಂದ ಉತ್ತಮ ಶಿಕ್ಷಕರೆಂದು ಹೆಸರು ಪಡೆದಿದ್ದಾರೆ.

ಇವರ ಗುರುತರವಾದ ಕಾರ್ಯಗಳನ್ನು ಗುರುತಿಸಿ ಇಲಾಖೆ ಉತ್ತಮ ಶಿಕ್ಷಕಿ ಪ್ರಶಸ್ತಿ, ಜಿಲ್ಲಾ ಪ್ರಶಸ್ತಿ, ರಾಜ್ಯಪ್ರಶಸ್ತಿ ಹಾಗೂ ರಾಷ್ಟ್ರಪ್ರಶಸ್ತಿಗೂ ಭಾಜನರಾಗಿದ್ದಾರೆ. ಇವರಿಗೆ ದಿನಾಂಕ ೦೫-೦೬-೨೦೧೫ರಂದು ದೆಹಲಿಯಲ್ಲಿ ನಡೆದ ಶಿಕ್ಷಕರ ದಿನಾಚರಣೆ ಸಮಾರಂಭದಲ್ಲಿ ಭಾರತದ ರಾಷ್ಟ್ರಪತಿಗಳು, ಪ್ರಧಾನಮಂತ್ರಿಗಳು ಹಾಗೂ ಅನೇಕ ಗಣ್ಯರುಗಳ ಸಮ್ಮುಖದಲ್ಲಿ ರಾಷ್ಟ್ರಪ್ರಶಸ್ತಿ ಗೌರವವನ್ನು ಪಡೆದಿರುತ್ತಾರೆ. ಇವರು ಈ ಎಲ್ಲಾ ಸಾಧನೆಗೆ ಶ್ರೀಮಠದ ಪೂಜ್ಯದ್ವಯರುಗಳ ಆಶೀರ್ವಾದವೇ ಕಾರಣ ಎಂದು ಭಕ್ತಿಪೂರ್ವಕವಾಗಿ ನೆನೆಪಿಸಿಕೊಳ್ಳುತ್ತಾರೆ. ಇವರ ಸಾಧನೆ ಶಿಕ್ಷಕರಿಗೆ, ವಿದ್ಯಾರ್ಥಿವೃಂದಕ್ಕೆ ಪ್ರೇರಣೆಯಾಗಿ ಇವರು ಇನ್ನೂ ಹೆಚ್ಚಿನದಾಗಿ ಶೈಕ್ಷಣಿಕವಾಗಿ ಹಾಗೂ ಸಾಮಾಜಿಕವಾಗಿ ಸಾಧನೆ ಮಾಡಲೆಂದು 'ಸಿದ್ಧಗಂಗಾ' ಹಾರೈಸುತ್ತದೆ.

❑

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೮೩೩. | ಶ್ರೀ ಎಸ್.ಎಂ. ಗೋವಿಂದಯ್ಯ, ಬೆಂಗಳೂರು | ೧೦,೦೧೦.೦೦ |
| ೮೩೪. | ಶ್ರೀ ಬಿ.ಎ. ಗುರುಮೂರ್ತಿ, ಸಕಲೇಶಪುರ | ೧,೦೦೦.೦೦ |
| ೮೩೫. | ಲೇ. ಹೆಚ್.ಎಸ್. ರತ್ನಮ್ಮ W/o ಹೆಚ್.ಬಿ. ಸಂಗಪ್ಪ, ಸಕಲೇಶಪುರ | ೫೦,೦೦೦.೦೦ |
| ೮೩೬. | ಶ್ರೀ ಸಿದ್ಧಣ್ಣ ಎಸ್. ಪಾಟೀಲ್, ನಾಗಪುರ | ೧೧,೦೦೦.೦೦ |
| ೮೩೭. | ಶ್ರೀ ಗಂಗಾಧರಯ್ಯ ಎ.ಇ., ನೆಲಮಂಗಲ | ೩೬,೫೦೦.೦೦ |
| ೮೩೮. | ಶ್ರೀಮತಿ ಚನ್ನಮ್ಮ ಮತ್ತು ಟಿ.ಬಿ. ಗಂಗಣ್ಣ, ತಟ್ಟೆಕೆರೆ | ೫,೦೦೧.೦೦ |
| ೮೩೯. | ಶ್ರೀ ಚನ್ನಬಸವಯ್ಯ, ತಾಳಗುಂದ | ೫,೨೦೦.೦೦ |
| ೮೪೦. | ಶ್ರೀ ಆರ್.ಎಸ್. ಹುಚ್ಚಾಚಾರಿ, ಬೆಂಗಳೂರು | ೧,೦೦೫.೦೦ |
| ೮೪೧. | ಶ್ರೀ ಎಸ್. ಮಹೇಶ್, ಬೆಂಗಳೂರು | ೨,೦೦೧.೦೦ |
| ೮೪೨. | ಶ್ರೀ ವೈ.ಎ. ಸೋಮಶೇಖರಯ್ಯ, ಬೆಂಗಳೂರು | ೧೨,೩೪೫.೦೦ |
| ೮೪೩. | ಶ್ರೀ ಜಿ.ಎನ್. ರಾಜಶೇಖರ್, ಬೆಂಗಳೂರು | ೧೦,೦೦೧.೦೦ |
| ೮೪೪. | ಶ್ರೀ ಹೆಚ್.ಆರ್. ಪ್ರಸಾದ್, ಹಲಸುಲಿಗೆ | ೧,೦೦೦.೦೦ |
| ೮೪೫. | ಶ್ರೀ ದಕ್ಷಿಣಾಮೂರ್ತಿ, ಬೆಂಗಳೂರು | ೧೦,೦೦೦.೦೦ |
| ೮೪೬. | ಶ್ರೀ ಕೆಂಪಹನುಮಯ್ಯ, ಚಿಕ್ಕಕೊರಟಗೆರೆ | ೧,೦೦೦.೦೦ |
| ೮೪೭. | ಶ್ರೀ ಎಂ. ದೊಡ್ಡಸಿದ್ಧಯ್ಯ, ತುಮಕೂರು | ೫,೦೦೧.೦೦ |
| ೮೪೮. | ಶ್ರೀ ವೈ.ಆರ್. ಜಗದೀಶ್, ಬೆಂಗಳೂರು | ೫,೦೦೧.೦೦ |
| ೮೪೯. | ಶ್ರೀ ಎ.ಸಿ. ಗಂಗಣ್ಣ, ಅರಳಗುಪ್ಪೆ | ೨,೦೦೦.೦೦ |
| ೮೫೦. | ಶ್ರೀ ಸಿ.ಹೆಚ್. ತಿಮ್ಮಪ್ಪ, ಆನೆಕೆರೆ | ೫,೦೦೦.೦೦ |
| ೮೫೧. | ಶ್ರೀಮತಿ ಕೆ.ಎಸ್. ಮೇಘಲ, ಬೆಂಗಳೂರು | ೧೦,೦೦೦.೦೦ |
| ೮೫೨. | ಶ್ರೀ ಕೆ.ಎಸ್. ಪ್ರಜ್ವಲ್, ಬೆಂಗಳೂರು | ೧೦,೦೦೦.೦೦ |
| ೮೫೩. | ಶ್ರೀ ಹೆಚ್.ಎಸ್. ಶಂಕರಯ್ಯ, ಹಾಸನ | ೧,೦೦೦.೦೦ |
| ೮೫೪. | ಶ್ರೀ ಪಿ.ವಿ. ನಂಜೇಗೌಡ, ಪಡುನಲಳು | ೧,೦೦೦.೦೦ |
| ೮೫೫. | ಶ್ರೀ ಸಿ.ಎಸ್. ಮೋಹನ್‌ಕುಮಾರ್ ಮತ್ತು ಮಕ್ಕಳು, ಚಿಕ್ಕೋಟಿ | ೧,೦೦೦.೦೦ |
| ೮೫೬. | ಶ್ರೀ ಪಿ. ರಾಜಶೇಖರಪ್ಪ, ಟಿ. ಮಾಯಗೊಂಡಹಳ್ಳಿ | ೧,೦೦೧.೦೦ |
| ೮೫೭. | ಶ್ರೀ ಎಂ.ಎ. ಟೇಕೇಶ್ವರಯ್ಯ, ಟಿ. ಮಾಯಗೊಂಡಹಳ್ಳಿ | ೧,೦೦೧.೦೦ |
| ೮೫೮. | ಶ್ರೀ ಎಂ.ಎಸ್. ದಶರಥರಾಮಯ್ಯ, ತುಮಕೂರು | ೧೦,೦೦೧.೦೦ |
| ೮೫೯. | ಶ್ರೀ ಬಿ.ಹೆಚ್. ಮಹೇಶಯ್ಯ, ಬ್ಯಾಲಕೆರೆ | ೧,೦೦೦.೦೦ |
| ೮೬೦. | ಶ್ರೀ ಎಸ್.ಡಿ. ರಮೇಶ್, ತುಮಕೂರು | ೧,೦೦೦.೦೦ |
| ೮೬೧. | ಶ್ರೀ ಶಿವಪ್ರಸಾದ್, ಗೌರಿಬಿದನೂರು | ೬,೫೦೧.೦೦ |
| ೮೬೨. | ಶ್ರೀ ಟಿ. ರಾಘವೇಂದ್ರ, ಬೆಂಗಳೂರು | ೧೦,೦೧೦.೦೦ |
| ೮೬೩. | ಶ್ರೀ ಪಿ.ಜಿ. ವೆಂಕಟೇಶ್ ರಾವ್, ಮೈಸೂರು | ೫,೦೦೧.೦೦ |
| ೮೬೪. | ಶ್ರೀ ಕರಿಸಿದ್ಧಯ್ಯ, ತಿಪಟೂರು | ೪,೦೦೦.೦೦ |
| ೮೬೫. | ಶ್ರೀಶೈಲ ಅನಿಯಪ್ಪನವರ, ಬೆಂಗಳೂರು | ೫,೦೦೧.೦೦ |
| ೮೬೬ | ಶ್ರೀ ತೇಜ ಮತ್ತು ಅನಿಯಪ್ಪನವರ, ಬೆಂಗಳೂರು | ೫,೦೦೧.೦೦ |

*(ಮುಂದುವರೆಯುತ್ತದೆ)*



ತುಮಕೂರಿನಲ್ಲಿ ನಡೆದ ರಾಜ್ಯಮಟ್ಟದ 3 ದಿನಗಳ ಅಂಧರ ಕ್ರಿಕೆಟ್ ಪಂದ್ಯಾವಳಿಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಎಸ್.ಐ.ಟಿ.ಕ್ರೀಡಾಂಗಣದಲ್ಲಿ ಪಂದ್ಯಾವಳಿಗಳಿಗೆ ಚಾಲನೆ ನೀಡಿ ಶುಭ ಕೋರಿದರು.



ನಗರದ ಎಸ್.ಎಸ್. ಪುರಂನಲ್ಲಿರುವ ಅಕ್ಷರ ಐ ಫೌಂಡೇಷನ್‌ನ ನೂತನ ಕಟ್ಟಡ ಉದ್ಘಾಟನೆಯನ್ನು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನೆರವೇರಿಸಿದರು. ಚಿತ್ರದಲ್ಲಿ ಸಂಸ್ಥೆಯ ವೈದ್ಯಕೀಯ ನಿರ್ದೇಶಕ ಡಾ. ಶ್ರೀನಿವಾಸ್ ಎನ್.ಟಿ, ಡಾ. ಪುಷ್ಪ ಎನ್ ರಂಗನಾಥ್ ಹಾಗೂ ತು.ಬಿ. ಮಲ್ಲೇಶ್ ಅವರನ್ನು ಕಾಣಬಹುದು.




ಶ್ರೀ ಸಿದ್ಧಗಂಗಾಮಠದಲ್ಲಿ ಶ್ರೀರಾಮ್ ಫೌಂಡೇಶನ್ ವತಿಯಿಂದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮ ನಡೆಯಿತು. ಕಾರ್ಯಕ್ರಮದಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿ, ನಿವೃತ್ತ ಮುಖ್ಯಶಿಕ್ಷಕ ಶ್ರೀ ಡಿ.ಎಸ್. ನಾಗರಾಜು, ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪನಿಯ ಇಡಿ ಸುದರ್ಶನ ಬಿ. ಹೊಳ್ಳ, ವಿಪಿ ಶ್ರೀಧರ್ ಮಟಮ್ ಮತ್ತಿತರರು ಇದ್ದರು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಶ್ರೀ ಸಿದ್ಧಗಂಗಾ ಮಹಿಳಾ ಪದವಿಪೂರ್ವಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಜಿ.ಎಸ್. ರೇಣುಕಪ್ಪನವರನ್ನು ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ವಿಧಾನಪರಿಷತ್ ಸದಸ್ಯರಾದ ಡಾ. ಎಂ.ಆರ್. ಹುಲಿನಾಯ್ಕರ್, ಸಿಐಟಿ ಕಾಲೇಜಿನ ಕಾರ್ಯದರ್ಶಿಗಳಾದ ಶ್ರೀ ಜಿ.ಬಿ. ಜ್ಯೋತಿಗಣೇಶ್ ಮತ್ತಿತರ ಗಣ್ಯರು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ನಡೆದ ಮಹಾತ್ಮಗಾಂಧೀಜಿ ಹಾಗೂ ಲಾಲ್‌ಬಹದೂರ್ ಶಾಸ್ತ್ರೀಜಿಯವರ ಜಯಂತಿ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಉಪನ್ಯಾಸವನ್ನು ನೀಡಿದ ವಿದ್ಯೋದಯ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಕೆ. ಚಂದ್ರಣ್ಣನವರನ್ನು ಆಶೀರ್ವದಿಸಿದರು.



ತುಮಕೂರು ವಿವಿಯ ಕುಲಪತಿಗಳಾದ ಡಾ. ರಾಜಾಸಾಬ್, ಕಲ್ಕತ್ತಾ ವಿಶ್ವಭಾರತಿ ವಿಶ್ವವಿದ್ಯಾಲಯದ ವಿಜ್ಞಾನಿಗಳಾದ ಪ್ರೊ. ಕಾಶೀನಾಥ್ ಭಟ್ಟಾಚಾರ್ಯ ಹಾಗೂ ಪ್ರೊ. ಸ್ವಾತಿ ಗುಪ್ತಾ ಭಟ್ಟಾಚಾರ್ಯ ಇವರುಗಳು ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಾಶೀರ್ವಾದ ಪಡೆದರು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232